# ಪಾರಂಪರಿಕ ಸಂರಕ್ಷಣಾ ವಿಧಾನಗಳು : ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ
ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು
ಹನುಮಂತಗೌಡ ರುದ್ರಗೌಡ ಕಲ್ಮನಿ

ಮಾರ್ಗದರ್ಶಕರು
ಡಾ. ವ್ಹಿ.ಎಸ್. ಬಡಿಗೇರ
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ





ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೦೯

# ಪಾರಂಪರಿಕ ಸಂರಕ್ಷಣಾ ವಿಧಾನಗಳು : ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ
ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು
ಹನುಮಂತಗೌಡ ರುದ್ರಗೌಡ ಕಲ್ಮನಿ



ಮಾರ್ಗದರ್ಶಕರು
ಡಾ. ವ್ಹಿ.ಎಸ್. ಬಡಿಗೇರ
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ






ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

೨೦೦೯

# ಮಾರ್ಗದರ್ಶಕರ ಪ್ರಮಾಣ ಪತ್ರ

ಪಾರಂಪರಿಕ ಸಂರಕ್ಷಣಾ ವಿಧಾನಗಳು : ಒಂದು ಅಧ್ಯಯನ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಹನುಮಂತಗೌಡ ರುದ್ರಗೌಡ ಕಲ್ಮನಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ವ್ಹಿ.ಎಸ್. ಬಡಿಗೇರ
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೨-೧೦-೦೮

# ಪ್ರಮಾಣ ಪತ್ರ

ಪಾರಂಪರಿಕ ಸಂರಕ್ಷಣಾ ವಿಧಾನಗಳು : ಒಂದು ಅಧ್ಯಯನ ಎಂಬ ನಿಬಂಧವನ್ನು ಡಾ. ವ್ಹಿ.ಎಸ್. ಬಡಿಗೇರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಭಾಷಾ ನಿಕಾಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಹನುಮಂತಗೌಡ ರುದ್ರಗೌಡ ಕಲ್ಮನಿ
ಸಂಶೋಧಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೩/೧೦/೨೦೦೬

# ಪರಿವಿಡಿ

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಭಾರತೀಯ ಚರಿತ್ರೆಯನ್ನು ಸಂಪ್ರದಾಯಿಕ ಸಿಂಹಾವಲೋಕನ ಮಾಡಿದಾಗ ಜ್ಞಾನಕ್ಕೆ ಪುರಾರನರು ನೀಡಿದ ಕಾಣಿಕೆ ಅನರ್ಘ್ಯ. ಚಾರಿತ್ರಿಕ ಆಕರಗಳು ಉಪಲಬ್ದವಾಗದೆಯಿರುವ ಪೂರ್ವಸ್ಥಿತಿಯಿಂದ ಹಿಡಿದು ಪೀಳಿಗೆಯಿಂದ ಪೀಳಿಗೆಗಳ ಮೂಲಕ ಸಾಂಸ್ಕೃತಿಕ ಮಾಹಿತಿಯನ್ನು ಬಿಂಬಿಸುವ ಮಾರ್ಗ ಮತ್ತು ದೇಶಿಯ ಪರಿಸರಕ್ಕೆ ಅನುಪಮವಾದ ಮೌಲಿಕ ಕೊಡುಗೆಯನ್ನು ಕೊಟ್ಟಿದ್ದಾರೆ. "ನಹೀಜ್ಞಾನೇನ ಸದೃಶಂ" ಎನ್ನುವ ಪ್ರಾಕ್ತನರ ಕಲ್ಪನೆ ಜ್ಞಾನದ ಆಳ ಪಾತಳಿಯ ಮೌಲ್ಯವನ್ನು ತೋರ್ಪಡಿಸುತ್ತದೆ.

ಇಂತಹ ಪಾರಂಪರಿಕ ಜ್ಞಾನ ಪರಿಕರಗಳನ್ನು ಸಂಗ್ರಹಿಸಿ ಸಂರಕ್ಷಿಸಿ ಸಂವರ್ಧಿಸಿ ಪ್ರಕಟಗೊಳಿಸುವುದು ಸಾಂಸ್ಕೃತಿಕ ಪರಂಪರೆಯ ಪುನಃರಚನೆಗೆ ಅಗತ್ಯವಾಗಿದೆ. ಸಂಸ್ಕೃತಿಯ ರೂವಾರಿಗಳು ಬರೆಸುವುದರ ಮೂಲಕ ಪೋಷಕರಾಗಿ ಬರೆಯುವುದರ ಮೂಲಕ ಲಿಪಿಕಾರರಾಗಿ ಸಾಂಸ್ಕೃತಿಕ ಸೊಗಡನ್ನು ಜೀವಂತವಾಗಿರಿಸಿದ್ದಾರೆ.

ಶಿಷ್ಟ ಪರಂಪರೆಯು ರಾಜ ಮರ್ಯದೆಯನ್ನು ಪಡೆದು ರಾರಾಜಿಸಿದರೆ, ದೇಶಿ ಪರಂಪರೆಯು ಜನರ ಹೃದಯ ಸಿಂಹಾಸನದಲ್ಲಿ ಸ್ಥಾನಪಡೆಯಿತು. ರಾಜಾಶ್ರಯದೊಳಗಿನ ಪಂಡಿತರು ಸ್ವತಂತ್ರ ಅಭಿವ್ಯಕ್ತಿ ಸ್ವಚಂದ, ಸಮೃದ್ಧ ಬದುಕಿನ ಸುಖ: ದುಖಃಗಳನ್ನು ಸಮರಸವಾಗಿ ಅನುಭವಿಸಿ ಉಕ್ತಗೊಳಿಸಿದರೆ, ಪಾಮರರು ಮೌಖಿಕವಾಗಿ ಪಾರಂಪರಿಕ ಜ್ಞಾನಕ್ಕೆ ಅಡಿಯಿರಿಸಿದರು "ಕಾಣೋದೆಲ್ಲಾಪದ, ಅನಿಸಿದ್ದೆಲ್ಲಾ ಹಾಡು, ಅನುಭವಿಸಿದ್ದೆಲ್ಲಾ ಜೀವಾಮೃತವೆನ್ನುವಂತೆ ಬೆಳೆದರು ಸಂಸ್ಕೃತಿಯ ವಕ್ತಾರರಾದ ಜನಪದರು ಶ್ರಮಸಂಸ್ಕೃತಿಯನ್ನು ತಮ್ಮ ಜೀವನಾನುಭವದ ಮೂಲಕ ಸಮೃದ್ಧ, ಸುಖಃ ಸಂಸ್ಕೃತಿಯನ್ನಾಗಿಸುವ ಪ್ರಯತ್ನದಲ್ಲಿ ಜನಪದಕಥೆ, ಗಾದೆ, ಒಗಟು, ಲಾವಣಿ,

ಕುಣಿತ, ಎಂಬಿತ್ಯಾದಿಗಳನ್ನು ಕಟ್ಟಿದರು. ಪಂಡಿತರು ವಿದ್ವತ್‌ಪ್ರತಿಭೆಗಳು ವಿವೇಕ ಬ್ರಹಸ್ಪತಿಗಳಾದ ಆಳ ಅರಸರು ತಮ್ಮ ಸಾಹಿತ್ಯ ರಾಜಾಜ್ಞೆ ಲೋಕೋಪಕಾರವಾದ ಸಾಧನೆ, ದಿಗ್ವಿಜಯಗಳನ್ನು ಹಸ್ತಪ್ರತಿ, ತಾಡೋಲೆ, ಶಾಸನಗಳು, ತಾಮ್ರ ಪಟಗಳು, ಕಡತಗಳಲ್ಲಿ ಶಾಸನ ಸ್ಮಾರಕಗಳಲ್ಲಿ ಅಭಿವ್ಯಕ್ತಗೊಳಿಸಿದರು.

ಪ್ರಸ್ತುತ ಐರೋಪ್ಯ ಸಂಸ್ಕೃತಿಯ ದಟ್ಟ ನೆರಳು ನಮ್ಮ ಸಂಸ್ಕೃತಿಯ ಮೇಲೆ ಪಸರುತಿದ್ದಂತೆ. ನಮ್ಮ ಇಡೀ ಸಾಮಾಜಿಕ ಬದುಕು ಸಡಿಲಗೊಂಡಿತು. ಬದುಕಿನ ಮೌಲ್ಯಗಳು ವ್ಯತ್ತಸ್ಥಗೊಂಡು ಭೌತಿಕ ಜೀವನವೇ ಪ್ರಧಾನಸ್ಥಾನ ಪಡೆಯಿತು. ಇದರ ಪರಿಣಾಮವಾಗಿ ನಮ್ಮ ಪ್ರಾಚೀನರು ಬದುಕಿನ ಹಿಂದೆ ನಿಗೂಢವಾಗಿಟ್ಟುಕೊಂಡು ಬಂದಿದ್ದ ಮೌಲ್ಯಗಳು ಅಲುಗಾಡಿದವು. ಪೂರ್ವಿಕರು ಉಳಿಸಿಕೊಂಡು ಬಂದಿದ್ದ ಸಾಂಸ್ಕೃತಿಕ ಸಂಪತ್ತು ಅಲಕ್ಷಿತವಾಗತೊಡಗಿತು. ಆಧುನಿಕರಣದ ಪರಿಣಾಮವಾಗಿ ವಿದ್ಯುನ್ಮಾನ ಉಪಕರಣಗಳು, ಬೃಹತ್ತೆ ಕೈಗಾರಿಕೆಗಳು, ಹೊಸ ಹೊಸ ಆವಿಷ್ಕಾರಗಳು ಪೂರ್ವಾತ್ಯ ರಾಷ್ಟ್ರಗಳಿಗೆ ಲಗ್ಗೆ ಇಟ್ಟವು. ಪರಿಣಾಮವಾಗಿ ದೇಶಿಯ ಗುಡಿಕೈಗಾರಿಕೆಗಳು ಕರಕುಶಲವಸ್ತುಗಳು ಸಂಸ್ಕೃತಿಯ ತಿರುಳಾಗಿದ್ದು ಶಾಸನಗಳು, ಹಸ್ತಪ್ರತಿಗಳು, ಕಡತಗಳು, ಕಂಪ್ಯೂಟರ್ ತಂತ್ರಜ್ಞಾನದ ಹಿನ್ನೆಲೆಯಲ್ಲಿ ಗೌಣವಾದವು `The world is flot' ಎನ್ನುವ ಜಾಗತೀಕರಣದ ನೆಲೆಯಲ್ಲಿ ಆಧುನಿಕರು ಸಾಂಸ್ಕೃತಿಕ ಸಂಪತ್ತನ್ನು ಕಡೆಗಣಿಸಿದರು.

ಮತ್ತೊಮದೆಡೆ ಕೆಲ ವಿದ್ವಾಂಸರುಪಾರಂಪರಿಕ ಪರಿಕರಣಗಳ ಸಂಗ್ರಹಣೆ ಸಂಪಾದನೆ, ಪುನರ್ ವಿಂಗಡನೆ, ಪ್ರಕಟಣೆಗಳ ಮೂಲಕ ವಿಶೇಷ ಒಲುಮೆಯನ್ನು ಹೊಂದಿ ತಂತ್ರಜ್ಞಾನದ ಹಿನ್ನೆಲೆಯಲ್ಲಿ ಪರಂಪರೆಯನ್ನು ಪುನಾರಚಿಸುವ ಮೂಲಕ ಅಂತರ್‌ಶಿಸ್ತಿಯ ಆಯಾಮವನ್ನು ನೀಡಿದರು. ಈ ಬಗೆಯ ಅಧ್ಯಯನ ಸಂಶೋಧನಾ ಕ್ಷೇತ್ರಕ್ಕೆ ಹೊಸ ತಿರುವನ್ನು ಕಲ್ಪಿಸಿ ಕೊಟ್ಟಂತಾಗಿದೆ.

ಪಾರಂಪರಿಕ ಸಂರಕ್ಷಣಾಕ್ರಮಗಳಲ್ಲಿ ಸಂಸ್ಕೃತಿ ಸಂವರ್ದನೆ ಪ್ರಮೇಯಗಳು ದಿನದಿಂದ ದಿನಕ್ಕೆ ಖಿಲವಾಗುತ್ತಿರುವ ಸಂದರ್ಭದಲ್ಲಿ ಅವುಗಳನ್ನೇ ಮೂಲಸಾಮಾಗ್ರಿಯಾಗಿ ಸ್ವೀಕರಿಸಿದ ವ್ಯಾಪಕ ಅಧ್ಯಯನ ಒಂದರ ಅಗತ್ಯವಿತ್ತು. ಅದನ್ನು ಕೈಗೊಂಡು ಪೂರೈಸುವುದೇ ಈ ಸಂಪ್ರಬಂಧದ ಉದ್ದೇಶ ಈ ಸಂಪ್ರಬಂಧದ ಅನೇಕ ವಿಷಯಗಳನ್ನು ತಕ್ಕ ಮಟ್ಟಿಗೆ ವಿವರವಾಗಿಯೇ ಮೊಟ್ಟದೊದಲಿಗೆ ಪ್ರಸ್ತಾಪಿಸಿದ ಗ್ರಂಥ ಡಾ.ವೀರೇಶ ಬಡಿಗೇರ ಅವರ 'ಕನ್ನಡ ಹಸ್ತಪ್ರತಿಗಳು ಮತ್ತು ಸಾಪ್ಟವೇರ್ ತಂತ್ರಜ್ಞಾನ' ಹಾಗೂ ಕನ್ನಡ ಹಸ್ತಪ್ರತಿಗಳ ಬಹು ಪರ್ಯಿಯ ಎನ್ನುವ ಪುಸ್ತಕಗಳು ಗಮನಾರ್ಹವಾದಂಥವು.

ಬಿ.ಎಸ್.ಸಣ್ಣಯ್ಯನವರ ವಸ್ತುಸಂಗ್ರಹಾಲಯ ಶಾಸ್ತ್ರದ ಮೂಲ ತತ್ವಗಳು ಹಾಗೂ ಗ್ರಂಥ ಸಂರಕ್ಷಣೆ ಪುಸ್ತಕಗಳು ಈ ನಿಟ್ಟಿನಲ್ಲಿ ಗಮನಿಸುವಂಥವು. ಇವುಗಳಲ್ಲದೆ ಲೇಖನ ಸಂಕಲನಗಳು ಸಂಶೋಧನ ಸಂಪುಟಗಳು ಅಲ್ಲಲ್ಲಿ ಮೊದಲು ಬೆಳಕು ಕಂಡಿವೆ. ಈ ಎಲ್ಲಾ ಪ್ರಯತ್ನಗಳನ್ನು

ಅವಲೋಕಿಸಿ ಕ್ಷೇತ್ರ ಕಾರ್ಯ ಮಾಡಿ ಹೊಸ ವಿಷಯಗಳನ್ನು ಸಂಗ್ರಹಿಸಿ ಪ್ರಸ್ತುತ ಸಂಪ್ರಬಂಧವನ್ನು ರೂಪಿಸಲಾಗಿದೆ, ಈ ಸಂಪ್ರಬಂಧದ ಪಿಷಯವು ಒಟ್ಟು ಐದು ಅಧ್ಯಾಯಗಳಲ್ಲಿ ಉದ್ಧೃತಗೊಂಡಿದೆ. ಪ್ರಾರಂಭದ ೧-ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ೨ ಪಾರಂಪರಿಕ ಪರಿಕರಗಳ ಸಂವರ್ಧನೆ, ಈ ನಾಲ್ಕು ಅಧ್ಯಯನಗಳಲ್ಲಿ ಕ್ರಮವಾಗಿ ಪಾರಂಪರಿಕ ಸಂರಕ್ಷಣಾ ತತ್ವಕ್ಕೆ ಮಹತ್ವ ಕಲ್ಪಿಸಿ ದಿನ ಬಳಕೆ ಸಾಮಗ್ರಿ ಧೀರ್ಘಾವಧಿ ಜ್ಞಾನ ಬಳಕೆ ಸಾಮಗ್ರಿ ಮತ್ತು ಜ್ಞಾನ ಸಾಮಗ್ರಿಗಳ ಸಾರವನ್ನು ಗ್ರಹಿಸಿ ಸಂಶೋಧಿಸಿ ಮರು ಪರಿಶೀಲಿಸಿ ಸಂರಕ್ಷಿಸಿ ಸಂವರ್ಧಿಸುವ ಹೊಸ ಅಂಶಗಳು ಚರ್ಚಿಸುತ್ತಾ ಪ್ರಸ್ತಾಪಿಸಲಾಗಿದೆ.

ಐದನೆಯದು ಸಮಾರೋಪ. ಪಾರಂಪರಿಕ ಸಂರಕ್ಷಣಾಕ್ರಮಗಳಲ್ಲಿ ಸಂಸ್ಕೃತಿ ಸಂವರ್ಧನಾ ಪ್ರಮೇಯಗಳನ್ನು ಕಣ್ ತೆಕ್ಕೆಗೆ ತಂದುಕೊಂಡು "ಪಾರಂಪರಿಕ ಪರಿಕರಗಳ ಸಂಗ್ರಹ, ಸಂವರ್ಧನೆ. ಸಂರಕ್ಷಣೆ ಸಂಗತಿಗಳನ್ನು ಹೊಸ ಆಯಾಮದಲ್ಲಿ ಪರಿಚಯಿಸಿ ಈ ಮೂಲಕ ಹೊಸತೊಂದು ಸಂಶೋಧನೆಗೆ ದಾಪುಗಾಲು ಇಟ್ಟಿದ್ದೇವೆ.

ಈ ನಿಟ್ಟಿನಲ್ಲಿ ಇನ್ನೂ ಆಳಸಂಶೋಧನೆಗೆ ಸಮೃದ್ಧ ಆಕರಗಳಿವೆ ಎಂಬ ಸೂಚನೆಯೊಂದಿಗೆ ಉಪಸಂಹಾರ ಮಾಡಲಾಗಿದೆ. ಈ ಸಂಪ್ರಬಂಧದಲ್ಲಿ ಕ್ಷೇತ್ರಕಾರ್ಯದ ಅನುಬಂಧಗಳನ್ನು ಲಗತ್ತಿಸಿದೆ. ಈ ದಿಕ್ಕಿನಲ್ಲಿ ಸಾಕಷ್ಟು ಸೈದ್ಧಾಂತಿಕ ಮತ್ತು ಪ್ರಯೋಗಿಕ ಅವಕಾಶದ ಸಾಧ್ಯತೆ ಇರುವುದರಿಂದ ಅವುಗಳ ವ್ಯಾಪ್ತಿ ಬಹು ವಿಸ್ತಾರವಾಗಿರುತ್ತದೆ. ಇದು ಕೇವಲ ಪ್ರಥಮ ಹೆಜ್ಜೆಯಾಗಿರುವುದರಿಂದ ಇಲ್ಲಿ ಎಲ್ಲವನ್ನು ಚರ್ಚಿಸಿಲ್ಲ. ಜಪಾನಿ ಗಾದೆಯೊಂದು ಉದ್ಘೋಷಿಸುವಂತೆ "ಸಾವಿರ ಮೈಲುಗಳ ದೊಡ್ಡ ಪ್ರಯಾಣವು ಮೊದಲ ಹೆಜ್ಜೆಯಿಂದ ಆರಂಭವಾಗುತ್ತವುದೆ". ಎನ್ನುವುದು ಸತ್ಯವಾದಲ್ಲಿ ಇದು ನನ್ನ ಮೊದಲ ಹೆಜ್ಜೇ ಎನ್ನುವುದು ವ್ಯಾಪ್ತಿ ಹೇಗೋ ಈ ಸಂಪ್ರಬಂಧದ ಮಿತಿ ಕೂಡಾ ಅದೇ ಆಗಿದೆ.

ಹೀಗೆ ಈ ಸಂಪ್ರಬಂಧಕ್ಕೆ ಒಂದು ಉದ್ದೇಶವನ್ನು ಕಲ್ಪಸಿಕೊಂಡು ನಿರ್ದಿಷ್ಟ ವ್ಯಾಪ್ತಿಯಲ್ಲಿ ರೂಪಿಸಲಾಗಿದೆ. ಇಡೀ ಅಧ್ಯಯನವನ್ನು ವಸ್ತುರೂಪಿಯಾದ ವ್ಯಾಪಾರಿ ಅಥವಾ ಪ್ರಾವರ್ಶನ ಸರಕುಗಳ ಹಿನ್ನೆಲೆಯಲ್ಲಿ ಗ್ರಹಿಸಿದೆ ಜೈವಿಕ ಸಾತತ್ಯದ ನೆಲೆಯಲ್ಲಿ ಗ್ರಹಿಸಲಾಗಿದೆ. ಮೂಲತಃ ಸಂಗ್ರಹ, ಸಂರಕ್ಷಣೆ, ಸಂವರ್ಧನೆ ಎನ್ನುವ ಪ್ರಮೇಯಗಳನ್ನೇ ಒಂದು ಸಾವಯವ ಸಾತತ್ಯವಾಗಿ ಗ್ರಹಿಸಲಾಗಿದೆ. ಇದರಿಂದ ಸಂಸ್ಕೃತಿಯ ಜೀವಂಥ ಹಾಗೂ ಕ್ರಿಯಾಶೀಲ ಅಂತಃಸಂಬಧಗಳನ್ನು ಮಾತೃಸ್ವರೂಪಿ ಸಂವೇದನೆಗಳ ಹಿನ್ನೆಲೆಯಲ್ಲಿ ಗುರುತಿಸಿಕೊಳ್ಳಲಾಗಿದೆ. ಹೀಗಾಗಿ ರೂಢಿಗತ ಅಧ್ಯಯನ ವಿಧಾನ ಹಾಗೂ ಗ್ರಹಿಕೆಗಿಂತ ಭಿನ್ನವಾದ ಸಾಂಸ್ಕೃತಿಕ ಅನುಸಂಧಾನವನ್ನು ನಡೆಸಲು ಸಾಧ್ಯವಾಗಿದೆ.



## ಪೀಠಿಕೆ

ಸಾವಿರಾರು ವರ್ಷಗಳ ಸುದೀರ್ಘ ಉಜ್ವಲ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ಪಾರಂಪರಿಕ ಪರಿಕರಗಳ ಸಂಗ್ರಹಣೆ ಒಂದು ಐತಿಹಾಸಿಕವು ಮತ್ತು ಮಹತ್ವಪೂರ್ಣವೂ ಆದ ವಿಶಿಷ್ಟ ಘಟನೆ. ನಾಡು-ನುಡಿ-ಸಂಸ್ಕೃತಿ ಮತ್ತು ಜನಜೀವನದ ಸರ್ವಮುಖಿಗಳನ್ನು ಸಂಶೋಧಿಸುವ ಸಂಗ್ರಹಣೆ ಹಾಗೂ ಮಾಡುವ ಮತ್ತು ಇಂದು ಅಧ್ಯಯಿನಿಸುವ ಕೆಲಸ ಅವಶ್ಯವಾಗಿದೆ.

"ನಿತ್ಯ ಜೀವನಕ್ಕೆ ಅವಶ್ಯವಾದ ಬಳಕೆಯ ಪರಿಕರಗಳನ್ನು ಅನುಪಯುಕ್ತ ವಸ್ತುಗಳ ಸಂಗ್ರಹವೆಂಬ ಭಾವನೆಯಿದೆ. ಆಧುನಿಕಪೂರ್ವ ಚರಿತ್ರೆಯಲ್ಲಿ ಕಾಣುವ ಎಷ್ಟೋ ಖಾಸಗಿ ಸಂಗ್ರಹಗಳು ,ಮಧ್ಯಯುಗದ ಪ್ರತಿಷ್ಠಿತರ ಸಾಮಾಜಿಕ ಅಂತಸ್ಥನ್ನು ಪ್ರತಿಬಿಂಬಿಸುತ್ತವೆ. ಆದರೆ ಅವು ಕಲಾತ್ಮಕ, ಸಾರ್ವಜನಿಕ ಸಂಗ್ರಹಗಳೆನಿಸುವುದಿಲ್ಲ. ಯಾವುದೇ ವಿಶೇಷ ಸಂದರ್ಭದಲ್ಲಿ ಗಣ್ಯರಿಗೆ, ವಿಶೇಷ ವ್ಯಕ್ತಿಗಳಿಗೆ ಮಾತ್ರ ಇವನ್ನು ತೋರಿಸಲಾಗುತ್ತದೆ. ಇವುಗಳಿಗೆ ಒಂದು ಜನಸಾಮಾನ್ಯ ಹಿತಾಸಕ್ತಿ ಇರಲಿಲ್ಲ. ಆದರೂ ತಮ್ಮದೇ ಆದ ರೀತಿಯಲ್ಲಿ ಸಂಗ್ರಹಿತ ವಸ್ತುಗಳನ್ನು ಇವರು ಸಂಗೋಪನ ಮಾಡುತ್ತಿದ್ದರು"[೧].

ಕೆಲವೆಡೆ ಸ್ವಹಿತಾಸಕ್ತಿಗಳಿಂದಲೂ ಬೇರೆಯವರ ಪ್ರಭಾವದಿಂದಲೂ ಮಹಾನ್ ವ್ಯಕ್ತಿಗಳ ಸಂಪರ್ಕದಿಂದಲೂ ಸಂಗ್ರಹಿತವಾಗಿರುವುದನ್ನು ಗಮನಿಸಬಹುದು. ಕೈಫಿಯತ್ತುಗಳಂಥ ದಾಖಲೆಗಳ ಸರ್ವೇಕ್ಷಣೆ, ಸಂಗ್ರಹ, ಸಂರಕ್ಷಣೆಯ ಕಾರ್ಯಕ್ಕೆ ಶ್ರೀಕಾರ ಹಾಕಿದವರು. ವಿದೇಶಿ ವಿದ್ವಾಂಸರು. ಕರ್ನಲ್‌ಮೆಕೆಂಜೆ ಆದಿಯಾಗಿ ಅನೇಕ ವಿದೇಶಿ, ದೇಶೀ ಪಂಡಿತರು ಆ ಬಗೆಗೆ ಜನರಲ್ಲಿ ತಿಳಿವಳಿಕೆಯನ್ನು ಮೂಡಿಸುವಲ್ಲಿ ತೊಡಗಿದರು.

ಅಲ್ಲಿಂದ ಪಾರಂಪರಿಕ ಪಳಿಯುಳಿಕೆಗಳನ್ನು ಸಂರಕ್ಷಣೆ ಮಾಡುವ ಜಾಗೃತಿಯ ಪರಿಪಾಠವೊಂದು ನಮ್ಮಲ್ಲಿ ಬೆಳೆದು ಬಂದಿತು. ಪ್ರಾಚೀನ ಕೃಷಿ ಹಾಗೂ ದಿನಬಳಕೆ ಸಾಮಗ್ರಿಗಳ ಸಂಸ್ಕೃತಿಯ ಗುರುತುಗಳನ್ನು ಸಂಗ್ರಹಿಸುವ ಸಂಗೋಪನಗೊಳಿಸುವ ಕಾರ್ಯವೂ ಜ್ಞಾನ ಸಾಮಗ್ರಿಗಳಷ್ಟೇ ಅವಶ್ಯವಾಗಿದೆ.

ಪ್ರಾಚೀನ ಕೃಷಿ ಹಾಗೂ ದಿನಬಳಕೆ ಸಾಮಗ್ರಿಗಳನ್ನು ಗತಕಾಲಕ್ಕೆ ಸೇರಿದಂಥವು. ಅವು ಮುಂದಿನ ತಲೆಮಾರಿಗೆ ತಲುಪಬೇಕು ಎಂದು ಸ್ಥಿರರೂಪದಲ್ಲಿ ಸಂಗ್ರಹಿಸುತ್ತ ಬರಲಾಯಿತು ಇಂಥ ವಸ್ತುಗಳಲ್ಲಿ ಜ್ಞಾನ ಸಾಮಗ್ರಿಗಳಾದ ಹಸ್ತಪ್ರತಿಗಳು, ಶಾಸನಗಳು, ಕಡತಗಳು, ಆಯುಧಗಳು, ನಾಣ್ಯಗಳು ನಿತ್ಯ ಬಳಕೆಯ ವಸ್ತುಗಳು ಕೃಷಿ ಪರಿಕರಗಳು, ಉಡುಗೆ–ತೊಡುಗೆಗಳು, ಧಾರ್ಮಿಕ ನಂಬಿಕೆಗಳ ಜನಪದ ಹಾಡುಗಳು, ಕತೆಗಳು, ಕಲೆಗಳು, ರೂಢಮೂಲ ಜ್ಞಾನಪರಿಕರಗಳು ಇತ್ಯಾದಿ ಸಂಗತಿಗಳು ಸಮಾವೇಶಗೊಳ್ಳುತ್ತವೆ.

ಇಂಥ ಸ್ಥಾಪಿತ ಪ್ರಕ್ರಿಯೆಗಳಲ್ಲಿ ಬಹುಮುಖ್ಯವಾಗಿ ಗೋಚರಿಸುವ ಸಂಗತಿಯೆಂದರೆ ಸಂಸ್ಕೃತಿಯ ಜೀವಂತ ಸಂಗತಿಗಳನ್ನು ಗತಕ್ಕೆ ಸೇರಿಸಿ ಅವನ್ನು 'ಸಂಗ್ರಹಾಲಯದ ವಸ್ತುವಾಗಿ' ನಿಷ್ಕ್ರಿಯಗೊಳಿಸುವುದು. ಇದು ಐರೋಪ್ಯ ವಿದ್ವತ್‌ಲೋಕದಿಂದ ಬಂದ ಪರಂಪರೆಯಾಗಿದೆ. ಭಾರತೀಯ ಅಥವಾ ಸ್ಥಳೀಯ ಸಂಸ್ಕೃತಿಗಳ ಜೀವನ ಕ್ರಮದಲ್ಲಿ ಹಳತು ಅಥವಾ ಉಪಯೋಗಕ್ಕೆ ಬಾರದ ವಸ್ತಗಳೆಇಲ್ಲಿದ್ದಲ್ಲಿ ಶಿಷ್ಠ ಪರಂಪರೆಗಿಂತ ಭಿನ್ನವಾದ ಆವರ್ತನಶೀಲ ಬದುಕು ನಮ್ಮದು. 'ಹಳೇಬೇರು, ಹೊಸ ಚಿಗುರು ಕೂಡಿರಲು ಮರ ಸೊಬಗು' ಎಂದು ಡಿ.ವಿ.ಜಿ. ಹೇಳಿದ್ದು ಅರ್ಥಪೂರ್ಣವೆನಿಸುತ್ತದೆ. ಭಾರತೀಯ ಕಾಲಮಾನ ಪದ್ಧತಿಗಳಾದ ಋತುಮಾನಗಳು, ಹಬ್ಬಹರಿದಿನಗಳು, ಕೃಷಿಪದ್ಧತಿಗಳು, ಜೀವನ ಕ್ರಮಗಳು ಇವೆಲ್ಲವೂ ಜೀವಂತ ಹಾಗೂ ಚಕ್ರಾತ್ಮಕ ಪರಿಕಲ್ಪನೆಯುಳ್ಳಂಥವು.

## ೨.೧. ಸಂಗ್ರಹ ಯೋಗ್ಯ ಸಾಮಗ್ರಿಗಳು ಹಾಗೂ ಸ್ತ್ರೀ ಪ್ರಾಧಾನ್ಯತೆ

ಬ್ರಿಟಿಷ್ ಸರಕಾರವು ೧೮೦೬ರಲ್ಲಿ ಪೋಲೀಸ್ ಇಲಾಖೆಯ ಕ್ಯಾಪ್ಟನ್ ವ್ಯಾಟಸನ್‌ಎನ್ನುವವನನ್ನು ಭಾರತಕ್ಕೆ ಮೊದಲ ಅರಣ್ಯಪಾಲಕ (ಕನ್ಸರ್‌ವೇಟರ್ ಆಫ್ ಫಾರೆಸ್ಟ್) ಅಧಿಕಾರಿಯನ್ನಾಗಿ ನೇಮಿಸಿತು. ವಸಾಹತುಶಾಹಿಯ ಈ ಅರಣ್ಯ ನೀತಿಗೆ ಬಹುಮುಖ್ಯ ಕಾರಣ ಮಿಲಟರಿಯ ಅತಿರೇಕವಾದ ಬೇಡಿಕೆಗಳು ಹಾಗೂ ಮಿಲಿಟರಿಯ ಅತಿಯಾದ ಪ್ರಾಬಲ್ಯವೇ ಹೊರತು ಕಾಡುಗಳ ಸಂರಕ್ಷಣೆ ಮಾಡಬೇಕೆನ್ನುವ ಉತ್ಕೃಷ್ಟ ವೈಜ್ಞಾನಿಕ ನಿರ್ವಹಣಾ ಶಕ್ತಿಯಲ್ಲ. ಬ್ರಿಟಿಷ್ ವ್ಯಾಪಾರಿ ಹಿತಾಸಕ್ತಿಗಳು ಸುಮಾರು ಅರ್ಧಶತಮಾನಕ್ಕೂ ಮಿಕ್ಕಿ ಲಂಗುಲಗಾಮಿಲ್ಲದೆ ಕಾಡುಗಳನ್ನು ನಾಶಮಾಡಿತು. ಕಾಡುಗಳೆಂದರೆ ಕೃಷಿಗೆ ಒಂದು ದೊಡ್ಡ ತೊಡಕೆಂದು ಪರಿಗಣಿಸಲಾಗಿತ್ತು. ಏಕೆಂದರೆ ಕೃಷಿಯ ಮೇಲೆ ತೆರಿಗೆ ವಿಧಿಸಬಹುದಾಗಿತ್ತು. ಹಾಗಾಗಿ ಕಾಡುಗಳೆಂದರೆ ವಸಾಹತು ಸರಕಾರದ ಐಶ್ವರ್ಯವನ್ನು ಕಡಿತಮಾಡುವ ತೊಡಕುಗಳೆಂದೇ

ತಿಳಿಯಲಾಯಿತು. ಕೃಷಿ ಭೂಮಿಯನ್ನು ವಿಸ್ತರಿಸುವ ನೆಪದಲ್ಲಿ ಕಾಡುಗಳನ್ನು ಬೋಳುಮಾಡುತ್ತ ಹೋಗಲಾಯಿತು. ಸಂಚಿತ ರೂಪದ ಪ್ರಾಕೃತಿಕ ಸಂಪತ್ತನ್ನು ಮನಬಂದಂತೆ ನಾಶಮಾಡಿದ ಮೇಲೆ ಇಂಥ ದುರ್ಬಳಕೆಯನ್ನು ಹತೋಟಿಗೆ ತರುವ ಪ್ರಯತ್ನಗಳು ನಡೆದವು. ೧೮೬೫ರಲ್ಲಿ ಅತ್ಯುನ್ನತ ಶಾಸನ ಮಂಡಳಿ ಕಾಡುಗಳನ್ನು ಹಾಗೂ ಬಂಜರು ಭೂಮಿಗಳನ್ನು ಮೀಸಲು ಕಾಡು ಎಂದು ಘೋಷಿಸುವಂತಾಯಿತು. ಇದರಿಂದ ಅರಣ್ಯ ಸಂಪತ್ತುಗಳ ವೈಜ್ಞಾನಿಕ ನಿರ್ವಹಣೆ ಪ್ರಾರಂಭವಾಯಿತು. ಗಂಡಸರ ಯಜಮಾನಿಕೆಯ ಸಂಕುಚಿತ ಹಿತಾಸಕ್ತಿಗಳ ದೃಷ್ಟಾಂತವಾಗಿ ವ್ಯಾಪಾರೀ ಅರಣ್ಯ ನೀತಿಯನ್ನು ವೈಜ್ಞಾನಿಕ ಅರಣ್ಯ ನೀತಿಯೆಂದು ಸಮೀಕರಿಸಲಾಯಿತು.

ತಿಳುವಳಿಕೆಯ ದೃಷ್ಟಿಯಿಂದಾಗಲೀ ಜೀವಜಾಲಗಳ ಮೇಲಿನ ಪರಿಣಾಮ ದೃಷ್ಟಿಯಿಂದಾಗಲೀ ಇದು ಅಂತಹ ಅನುಕೂಲಕರವಾದ ನಿಯಮವೇನಾಗಿರಲಿಲ್ಲ. ತಮ್ಮ ಹೊಟ್ಟೆಪಾಡಿಗಾಗಿ ಹಾಗೂ ಉತ್ಪಾದನಾ ಸಾಮರ್ಥ್ಯಗಳಿಗಾಗಿ ಕಾಡುಗಳ ಮೇಲೆ ಅವಲಂಬಿತರಾಗಿರುವ ಜನರಲ್ಲಿ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಇದು ದಾರಿದ್ರ್ಯವನ್ನು ನೆಟ್ಟು ಬೆಳೆಸಿತು. ಅವರನ್ನು ಸ್ವಾಭಾವಿಕ ಜೀವಜಾಲದ ಸಾವಯವತೆಯಿಂದ ವಂಚಿತಗೊಳಿಸುತ್ತ ಬಂದಿತು. ಇದು ಅರಣ್ಯ ನೀತಿಯನ್ನು ನೀರಿನ ನಿರ್ವಹಣೆ, ಬೇಸಾಯ ಹಾಗೂ ಪಶುಪಾಲನಾ ವ್ಯವಸ್ಥೆಗಳಿಂದ ಕಿತ್ತು ಬೇರ್ಪಡಿಸಿತು. ಕಾಡಿನ ಸಾವಯವ ಜೀವಜಾಲದ ವೈವಿಧ್ಯವನ್ನು ಇದು "ಮರಮುಟ್ಟು"ಗಳನ್ನಾಗಿ ವ್ಯಾಪಾರಿ ಪ್ರಾಯೋಜನಕ್ಕೆ ಸೀಮಿತಗೊಳಿಸಿತು. ಲಾಭತಂದುಕೊಡುವ ಭೌತಿಕವಸ್ತುಗಳನ್ನಾಗಿಸಿತು. ಸಂಪನ್ಮೂಲಗಳ ಸಂಬಂಧದ ಈ ಹೊಸ ರಿವಾಜು, ಕಾಡುಗಳಿಗೆ ಇರುವ ಸಾಮುದಾಯಿಕ ಸಂಬಂಧದ ಸಂಕೀರ್ಣತೆಯನ್ನು, ಹಾಗೂ ಸಸ್ಯಲೋಕಕ್ಕೆ ಮತ್ತು ಇತರ ಸಂಪನ್ಮೂಗಳಾದ ನೀರು ಹಾಗೂ ಮಣ್ಣುಗಳಿಗೂ ಇರುವ ಸಂಕೀರ್ಣ ಸಂಬಂಧವನ್ನು ಕಡೆಗಣಿಸಿತು. ಈ ಮೂಲಕ ಈ ರಿವಾಜು ಜೀವಜಾಲದೊಳಗೆ ಅಸ್ಥಿರತೆಯನ್ನು ಹುಟ್ಟಿಹಾಕುವುದಷ್ಟೇ ಅಲ್ಲದೇ, ತನ್ನಷ್ಟಕ್ಕೆ ಜೀವಂತವಾಗಿದ್ದು ತನ್ನನ್ನು ತಾನು ಪುನರುತ್ಪಾದನೆಗೊಳಿಸಿಕೊಳ್ಳುವ ಪ್ರಕೃತಿಯನ್ನು ವಿನಾಶಕಾರಕವಾಗಿ ಬಳಸಿಕೊಳ್ಳುವಂತೆ ಮಾಡಿತು.

ಪ್ರಕೃತಿಯಿಂದ ಒದಗುವ ಬಹುಮುಖ ಅನುಕೂಲಗಳ ನಾಶದಿಂದಾಗಿ ಹೆಣ್ಣುಮಕ್ಕಳ ಹಾಗೂ ಬುಡಕಟ್ಟು ಜನರಂಥ ಸಾಮುದಾಯಿಕ ಜನರ ಆರ್ಥಿಕ ಹಿಡಿತದಮೇಲೆ ಹಲ್ಲೆ ನಡೆಯುತ್ತದೆ. ಮಣ್ಣು ನೀರು ಸ್ಥಿರಗೊಳ್ಳುವುದುರಿಂದ ಹಾಗೂ ಆಹಾರ, ಮೇವು, ಉರುವಲು, ಗೊಬ್ಬರ ಇತ್ಯಾದಿಯಾಗಿ ಸಿಗುವ ಬಹುಮುಖಿಯಾದ ಸಹಜ ಸಂಪನ್ಮೂಲಗಳ ನಾಶವಾಗುತ್ತದೆ. ಪಾರಂಪರಿಕ ಸಂಗ್ರಹ ಹಾಗೂ ನಿರ್ವಹಣಾ ಕೆಲಸದಲ್ಲಿ ಹೆಣ್ಣಿಗೆ ಪ್ರಧಾನಪಾತ್ರ. ಹೆಣ್ಣೇ ಅಲ್ಲಿ ಸಂಗ್ರಹ–ನಿರ್ವಹಣೆ ಹಾಗೂ ಸಂವರ್ಧನೆಗೆ ಕಾರಣಳು. ಆ ಪ್ರಕಾರ ಕಾಡುಗಳು ಅವರಿಗೆ ಕೇವಲ 'ಮರಮುಟ್ಟು'ಗಳ ಸಂಗ್ರಹ ಎಂದಾಗಲೀ, ಇನ್ನುಳಿದ ಜೀವಜಾಲದ ವ್ಯವಸ್ಥೆಯಿಂದ ಅವು ಪ್ರತ್ಯೇಕ ಎಂದಾಗಲೀ ಅವುಗಳಿಗಿರುವ ಆರ್ಥಿಕ ಮೌಲ್ಯವೆಂದರೆ ಮರಮುಟ್ಟುಗಳಿಗಿರುವ

ತಿಳಿಯಲಾಯಿತು. ಕೃಷಿ ಭೂಮಿಯನ್ನು ವಿಸ್ತರಿಸುವ ನೆಪದಲ್ಲಿ ಕಾಡುಗಳನ್ನು ಬೋಳುಮಾಡುತ್ತ ಹೋಗಲಾಯಿತು. ಸಂಚಿತ ರೂಪದ ಪ್ರಾಕೃತಿಕ ಸಂಪತ್ತನ್ನು ಮನಬಂದಂತೆ ನಾಶಮಾಡಿದ ಮೇಲೆ ಇಂಥ ದುರ್ಬಳಕೆಯನ್ನು ಹತೋಟಿಗೆ ತರುವ ಪ್ರಯತ್ನಗಳು ನಡೆದವು. ೧೮೬೫ರಲ್ಲಿ ಅತ್ಯುನ್ನತ ಶಾಸನ ಮಂಡಳಿ ಕಾಡುಗಳನ್ನು ಹಾಗೂ ಬಂಜರು ಭೂಮಿಗಳನ್ನು ಮೀಸಲು ಕಾಡು ಎಂದು ಘೋಷಿಸುವಂತಾಯಿತು. ಇದರಿಂದ ಅರಣ್ಯ ಸಂಪತ್ತುಗಳ ವೈಜ್ಞಾನಿಕ ನಿರ್ವಹಣೆ ಪ್ರಾರಂಭವಾಯಿತು. ಗಂಡಸರ ಯಜಮಾನಿಕೆಯ ಸಂಕುಚಿತ ಹಿತಾಸಕ್ತಿಗಳ ದೃಷ್ಟಾಂತವಾಗಿ ವ್ಯಾಪಾರೀ ಅರಣ್ಯ ನೀತಿಯನ್ನು ವೈಜ್ಞಾನಿಕ ಅರಣ್ಯ ನೀತಿಯೆಂದು ಸಮೀಕರಿಸಲಾಯಿತು.

ತಿಳುವಳಿಕೆಯ ದೃಷ್ಟಿಯಿಂದಾಗಲೀ ಜೀವಜಾಲಗಳ ಮೇಲಿನ ಪರಿಣಾಮ ದೃಷ್ಟಿಯಿಂದಾಗಲೀ ಇದು ಅಂತಹ ಅನುಕೂಲಕರವಾದ ನಿಯಮವೇನಾಗಿರಲಿಲ್ಲ. ತಮ್ಮ ಹೊಟ್ಟೆಪಾಡಿಗಾಗಿ ಹಾಗೂ ಉತ್ಪಾದನಾ ಸಾಮರ್ಥ್ಯಗಳಿಗಾಗಿ ಕಾಡುಗಳ ಮೇಲೆ ಅವಲಂಬಿತರಾಗಿರುವ ಜನರಲ್ಲಿ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಇದು ದಾರಿದ್ರ್ಯವನ್ನು ನೆಟ್ಟು ಬೆಳೆಸಿತು. ಅವರನ್ನು ಸ್ವಾಭಾವಿಕ ಜೀವಜಾಲದ ಸಾವಯವತೆಯಿಂದ ವಂಚಿತಗೊಳಿಸುತ್ತ ಬಂದಿತು. ಇದು ಅರಣ್ಯ ನೀತಿಯನ್ನು ನೀರಿನ ನಿರ್ವಹಣೆ, ಬೇಸಾಯ ಹಾಗೂ ಪಶುಪಾಲನಾ ವ್ಯವಸ್ಥೆಗಳಿಂದ ಕಿತ್ತು ಬೇರ್ಪಡಿಸಿತು. ಕಾಡಿನ ಸಾವಯವ ಜೀವಜಾಲದ ವೈವಿಧ್ಯವನ್ನು ಇದು "ಮರಮುಟ್ಟು"ಗಳನ್ನಾಗಿ ವ್ಯಾಪಾರಿ ಪ್ರಾಯೋಜನಕ್ಕೆ ಸೀಮಿತಗೊಳಿಸಿತು. ಲಾಭತಂದುಕೊಡುವ ಭೌತಿಕವಸ್ತುಗಳನ್ನಾಗಿಸಿತು. ಸಂಪನ್ಮೂಲಗಳ ಸಂಬಂಧದ ಈ ಹೊಸ ರಿವಾಜು, ಕಾಡುಗಳಿಗೆ ಇರುವ ಸಾಮುದಾಯಿಕ ಸಂಬಂಧದ ಸಂಕೀರ್ಣತೆಯನ್ನು, ಹಾಗೂ ಸಸ್ಯಲೋಕಕ್ಕೆ ಮತ್ತು ಇತರ ಸಂಪನ್ಮೂಗಳಾದ ನೀರು ಹಾಗೂ ಮಣ್ಣುಗಳಿಗೂ ಇರುವ ಸಂಕೀರ್ಣ ಸಂಬಂಧವನ್ನು ಕಡೆಗಣಿಸಿತು. ಈ ಮೂಲಕ ಈ ರಿವಾಜು ಜೀವಜಾಲದೊಳಗೆ ಅಸ್ಥಿರತೆಯನ್ನು ಹುಟ್ಟಿಹಾಕುವುದಷ್ಟೇ ಅಲ್ಲದೇ, ತನ್ನಷ್ಟಕ್ಕೆ ಜೀವಂತವಾಗಿದ್ದು ತನ್ನನ್ನು ತಾನು ಪುನರುತ್ಪಾದನೆಗೊಳಿಸಿಕೊಳ್ಳುವ ಪ್ರಕೃತಿಯನ್ನು ವಿನಾಶಕಾರಕವಾಗಿ ಬಳಸಿಕೊಳ್ಳುವಂತೆ ಮಾಡಿತು.

ಪ್ರಕೃತಿಯಿಂದ ಒದಗುವ ಬಹುಮುಖಿ ಅನುಕೂಲಗಳ ನಾಶದಿಂದಾಗಿ ಹೆಣ್ಣುಮಕ್ಕಳ ಹಾಗೂ ಬುಡಕಟ್ಟು ಜನರಂಥ ಸಾಮುದಾಯಿಕ ಜನರ ಆರ್ಥಿಕ ಹಿಡಿತದಮೇಲೆ ಹಲ್ಲೆ ನಡೆಯುತ್ತದೆ. ಮಣ್ಣು ನೀರು ಸ್ಥಿರಗೊಳ್ಳುವುದುರಿಂದ ಹಾಗೂ ಆಹಾರ, ಮೇವು, ಉರುವಲು, ಗೊಬ್ಬರ ಇತ್ಯಾದಿಯಾಗಿ ಸಿಗುವ ಬಹುಮುಖಿಯಾದ ಸಹಜ ಸಂಪನ್ಮೂಲಗಳ ನಾಶವಾಗುತ್ತದೆ. ಪಾರಂಪರಿಕ ಸಂಗ್ರಹ ಹಾಗೂ ನಿರ್ವಹಣಾ ಕೆಲಸದಲ್ಲಿ ಹೆಣ್ಣಿಗೆ ಪ್ರಧಾನಪಾತ್ರ. ಹೆಣ್ಣೇ ಅಲ್ಲಿ ಸಂಗ್ರಹ–ನಿರ್ವಹಣೆ ಹಾಗೂ ಸಂವರ್ಧನೆಗೆ ಕಾರಣಳು. ಆ ಪ್ರಕಾರ ಕಾಡುಗಳು ಅವರಿಗೆ ಕೇವಲ 'ಮರಮುಟ್ಟು'ಗಳ ಸಂಗ್ರಹ ಎಂದಾಗಲೀ, ಇನ್ನುಳಿದ ಜೀವಜಾಲದ ವ್ಯವಸ್ಥೆಯಿಂದ ಅವು ಪ್ರತ್ಯೇಕ ಎಂದಾಗಲೀ ಅವುಗಳಿಗಿರುವ ಆರ್ಥಿಕ ಮೌಲ್ಯವೆಂದರೆ ಮರಮುಟ್ಟುಗಳಿಗಿರುವ

ವ್ಯಾಪಾರಿ ಮೌಲ್ಯವೆಂದಾಗಲೀ ಪರಿಗಣಿತವಾಗಿರುವುದಿಲ್ಲ. ಉತ್ಪಾದಕತೆ ಆರ್ಥಿಕ ಮೌಲ್ಯಗಳನ್ನು ಪ್ರಕೃತಿಯ ಪರವಾಗಿ ಮತ್ತು ಹೆಂಗಸರ ಪರವಾಗಿ ವ್ಯಾಖ್ಯಾನಮಾಡಲಾಗುತ್ತದೆ. ಬಹುಮುಖೀ ಪ್ರಯೋಜನೆಗಳಿಗೆ ಒದಗುವಂತೆ ಜೈವಿಕ ಜಾಲದ ಸಮಗ್ರತೆಯನ್ನು ನಿರ್ವಹಿಸುವ ಮೂಲಕ ಮೂಲಭೂತ ಅಗತ್ಯಗಳನ್ನು ಈಡೇರಿಸಿಕೊಳ್ಳುವುದು ಎಂದು ವ್ಯಾಖ್ಯಾನಮಾಡಲಾಗುತ್ತದೆ. ಅವುಗಳ ಅರ್ಥ ಹಾಗೂ ಅಳತೆ ಗಂಡಸರ ಯಜಮಾನಿಕೆಯ ಅರಣ್ಯ ನೀತಿಯ ಪ್ರಕಾರ, ನಿಕೃಷ್ಟಗೊಳಿಸಿ ಕೊಡಲಾಗುವ ಅರ್ಥ ಮತ್ತು ಅಳತೆಗಳಿಗಿಂತ ಸಂಪೂರ್ಣ ಭಿನ್ನವಾದಂಥವು. ಜೀವಜಾಲದ ಜೀವ ವಿಕಾಸದ ಅರಣ್ಯ ನೀತಿಯನ್ನು ಬಿಟ್ಟು ನಿಕೃಷ್ಟಗೊಂಡ ವ್ಯಾಪಾರೀ ಅರಣ್ಯ ನೀತಿಗೆ ಬಂದು ಮುಟ್ಟಿದಾಗ ಎಲ್ಲ ವೈಜ್ಞಾನಿಕ ಪರಿಕಲ್ಪನೆಗಳು ಜೈವಿಕ ಜಾಲದ ಮೇಲೆ ಅವಲಂಬಿತವಾಗಿ ಪರಿಸ್ಥಿತಿಯಿಂದ ಮಾರ್ಪಾಡಾಗುತ್ತವೆ. ಹಾಗಾಗಿ ಸಾಂಪ್ರದಾಯಿಕ ಸಮುದಾಯಗಳಾದ ಬುಡಕಟ್ಟು ಸಮೂಹಗಳಿಗೆ, ಹೆಂಗಸರಿಗೆ ಹಾಗೂ ಇತರ ಕಾಡಿನ ಜನಸಮುದಾಯಗಳಿಗೆ ಕಾಡುಗಳೆಂದರೆ ನೀರು, ಔಷಧಿ ಸಸ್ಯಗಳು, ಮೇವು, ಉರುವಲು, ನಾರು–ಬೇರುಗಳು ಮತ್ತು ಜೀವಾಣುಗಳು ಕೂಡ ನಿಧಿಯನ್ನು ಉತ್ಪಾದಿಸುವ ಸಂಕೀರ್ಣ ಜೈವಿಕಜಾಲ ಎನಿಸುತ್ತದೆ. ಆದರೆ ಗಂಡಸು ಪ್ರಧಾನ ವೈಜ್ಞಾನಿಕ ವ್ಯವಹಾರದ ಭಾಗವಾಗಿ ಬರುವ ಅರಣ್ಯಾಧಿಕಾರಿಗೆ ಈ ಭಾಗಗಳಲ್ಲೆವೂ ನಿಷ್ಪ್ರಯೋಜಕ ನಿರುಪಯುಕ್ತವಾದ ಕಸ, ನಿವಾರಿಸಿಕೊಳ್ಳಬೇಕಾದ ಅಡಚಣೆಗಳು. ಈ ಎರಡು ಬದುಕಿನ ದೃಷ್ಟಿಕೋನಗಳು ಉತ್ಪಾದಕತೆ ಹಾಗೂ ಮೌಲ್ಯಗಳ ಬಗ್ಗೆ ಎರಡು ಭಿನ್ನ ಧೋರಣೆಗಳನ್ನು ಹೊಂದಿದಂಥವು. ಒಟ್ಟಾರೆ ಉತ್ಪಾದಕತೆ ಹಾಗೂ ಬದುಕಿ ಉಳಿಯಲು ಅಗತ್ಯವಿರುವ ಉತ್ಪಾದಕತೆಗಳಲ್ಲಿ ಹೆಂಗಸರು ವಹಿಸುವ ಪಾತ್ರ ಮುಖ್ಯವಾದದ್ದು.

ಮೇಲಿನ ಒಟ್ಟು ಚರ್ಚೆಯ ಗ್ರಹಿಕೆ ಇಷ್ಟು, ಸಾವಯವಶೀಲವಾದ ಸಂಗ್ರಹ–ಸಂರಕ್ಷಣೆ ಹಾಗೂ ಸಂವರ್ಧನೆಯ ಸಾಂಪ್ರದಾಯಿಕ ಕ್ರಮಗಳಿಗೂ, ವ್ಯವಹಾರ ಹಾಗೂ ವಸ್ತುರೂಪಿಯಾದ 'ವೈಜಾನಿಕ' ನಿರ್ವಹಣಾ ಶಾಸ್ತ್ರಗಳಿಗೂ ಇರುವ ವ್ಯತ್ಯಾಸಗಳನ್ನು ಪತ್ತೆ ಮಾಡುವುದು. ಸಾಂಪ್ರದಾಯಿಕ ಸಂರಕ್ಷಣಾ ಕ್ರಮಗಳಲ್ಲಿ ಹೆಣ್ಣಿಗೆ ಪ್ರಥಮಾದ್ಯತೆ, ಆಧುನಿಕವಾದ ವಸ್ತುರೂಪಿಯಾದ ಸಂರಕ್ಷಣಾ ಕ್ರಮಗಳಲ್ಲಿ ಗಂಡು ಪ್ರಧಾನವಾಗುತ್ತದೆ. ಇಂದು ಬಳಕೆಯಲ್ಲಿರುವ ಬ್ರಿಟಿಷ್‌ಪ್ರಣೀತ ಎಲ್ಲ ಸಂಗ್ರಹ–ಸಂರಕ್ಷಣೆ ಹಾಗೂ ಸಂವರ್ಧನಾ ಕ್ರಮಗಳು ವ್ಯವಹಾರ ರೂಪಿಯಾದ ಜಡಪರಿಕಲ್ಪನೆಗಳು. ಸಂಗ್ರಹಿತ ವಸ್ತುಗಳಿಗೂ ಸಂಗ್ರಹ ವಿಧಾನಗಳಿಗೂ ಯಾವುದೇ ರೀತಿಯ ಜೈವಿಕ ಸಂಬಂಧಗಳಿಲ್ಲ. ಜೀಜಾಲದ ಸ್ವಾಭಾವಿಕ ಗುಣಕ್ಕೂ ರಾಸಾಯನಿಕ ಮೂಲದ ಆಧುನಿಕ ಕ್ರಮಕ್ಕೂ ಪರಸ್ಪರ ಸಾಮ್ಯವೇ ಇಲ್ಲ. ಆಧುನಿಕ ರಾಸಾಯನಿಕಗಳು ಸಂಗ್ರಹಿತ ವಸ್ತುವಿನ ಅಸ್ಥಿಪಂಜರ ರೂಪವನ್ನು ಒಂದು ತೋರಿಕೆಯ ವಸ್ತುಸಂಗ್ರಹಾಲಯದ ವೈಭವೀಕೃತ ಅಥವಾ ಪಳಿಯೊಳಿಕೆ ರೂಪವನ್ನಾಗಿ ಪರಿಗಣಿಸುತ್ತವೆ. ಕಾಡು ಹಾಗೂ ಅದರ ಉತ್ಪನ್ನಗಳು,

ಕೃಷಿಪರಿಕರಗಳು, ದಿನಬಳಕೆಯ ವಸ್ತುಗಳು ಅಲಂಕಾರ ಹಾಗೂ ಪ್ರಾಚೀನ ಅವಶೇಷಗಳಾಗಿ ಮಾತ್ರ ಕಾಣುತ್ತವೆ. ಜೀವಜಾಲದ ಹಂಗಿಲ್ಲದ ಇಂಥ ಪರಿಕಲ್ಪನೆಗಳು ಜೈವಿಕ ಮೂಲದ ಸಂಗತಿಗಳನ್ನು ಹೈಬ್ರಿಡ್ ಕೋಳಿಗಳಂತೆ ನಿರ್ಭಾವುಕವಾಗಿ ಸಲಹುತ್ತವೆ.

ಗಂಡಸರ ಯಜಮಾನಿಕೆಯ ಅರಣ್ಯ ನೀತಿ ಹಾಗೂ ಬಂಡವಾಳಶಾಹಿ ದೃಷ್ಟಿಕೋನಗಳು ಹಾಗೂ ಕ್ರಷಿಯಂಥ ಜೀವಂತ ವೈವಿಧ್ಯತೆ ಹಾಗೂ ಸ್ವಾಯತ್ತತೆಯನ್ನು ಎರಡು ಹೋಳುಗಳಾಗಿ ಮಾಡುತ್ತದೆ. ಒಂದುಕಡೆ ವ್ಯಾಪಾರಕ್ಕೆ ಅನುಕೂಲವಾಗುವ ಸತ್ತ ಮರಮುಟ್ಟುಗಳನ್ನು ಹೆಚ್ಚಿಸುತ್ತ ಇನ್ನೊಂದು ಕಡೆಯಿಂದ ಜೀವಜಲಕ್ಕೆ ಅನುಕೂಲ ಒದಗಿಸುವ ಕಳೆಸಸ್ಯಗಳನ್ನು ಕಸವೆಂದು ಪರಿಗಣಿಸುತ್ತದೆ. ವಿಚಿತ್ರವೆಂದರೆ ಕಸವೇನೀರಿನ ಒರತೆಗಳನ್ನು, ಭೂಮಿಯ ಸಾರವನ್ನು ಪೋಷಿಸುತ್ತದೆ. ಇಷ್ಟು ಮಾತ್ರವಲ್ಲದೇ ರೈತಾಪಿ ಸಮುದಾಯಗಳ ಆಹಾರ, ಮೇವು, ಉರುವಲು, ಔಷಧ ಇತ್ಯಾದಿ ಬಹುಮುಖಿ ಅಗತ್ಯವನ್ನು ಈಡೇರಿಸುತ್ತದೆ.

ಕೃಷಿ ಹಾಗೂ ಕಾಡಿನ ಕಸುಬುಗಳ ಮುಖಾಂತರ ಹೆಂಗಸರು ನಡೆಸುವ ಚಟುವಟಿಕೆಗಳು ಪ್ರಕೃತಿಯ ಜೀವಂತಿಕೆಯನ್ನು ಕಾಪಾಡುತ್ತವೆ. ಮತ್ತು ಪೋಷಿಸುತ್ತವೆ. ಪೋಷಣೆಯ ಈ ಚಟುವಟಿಕೆಗಳ ಮುಖಾಂತರ ಆಹಾರ ಮತ್ತು ನೀರು ಒದಗುವುದಲ್ಲದೆ ವೈವಿಧ್ಯಮಯ ಜೀವಜಾಲದ ಸೃಷ್ಟಿಗೆ ದಾರಿಯಾಗುತ್ತದೆ. ಪ್ರಕೃತಿಯ ಜೀವಜಾಲದ ಸಮಗ್ರತೆಗೆ ಉಂಟಾಗುವ ಹಾನಿಯನ್ನು ನೇರವಾಗಿ ಅನುಭವಿಸುವವರು ಹೆಂಗಸರು ಹಾಗೂ ರೈತರೇ ಆಗಿದ್ದಾರೆ. ಸಮಗ್ರ ಹಾಗೂ ಸಂರಕ್ಷಣಾ ನೀತಿ ಎನ್ನುವುದು ಹೆಂಗಸರಿಗೆ ಜೀವಜಾಲದ ಪೋಷಣೆ ಹಾಗೂ ಆಹಾರ ಉತ್ಪನ್ನ ಜೊತೆಗೆ ಫಲವಂತಿಕೆಯನ್ನು ಜೀವಂತವಾಗಿರಿಸುವುದೂ ಅಗಿದೆ. ಈ ಪೋಷಣೆಯ ಪ್ರವೃತ್ತಿ ಜೀವಂತವಾಗಿರುವ ಪ್ರಕೃತಿ ಸಾರಗಳ, ಸ್ವರೂಪಗಳ ಮತ್ತು ನೀರಿನ ರೂಪದಲ್ಲಿ ತಾಳಿಕೆ ಬರುವ ಆಹಾರೋತ್ಪಾದನೆಯ ಜಾಲವನ್ನು ಒದಗಿಸುತ್ತದೆ. ಕಾಡಿನ ಜೊತೆ ಕಾಡಿನಲ್ಲಿ ಕೈಗೊಳ್ಳುವ ಚಟುವಟಿಕೆಗಳ ಈ ಪ್ರಕ್ರಿಯೆಯನ್ನು ಸುಗಮಗೊಳಿಸುತ್ತವೆ. ಉದಾಹರಣೆಗೆ ಬೆಳೆ ಮಧ್ಯದ ಕಸ ಕಿತ್ತಿದರೆ ಅದು ಬೆಳೆಗೆ ಸಂರಕ್ಷಣೆ ಹಾಗೂ ಸಂವರ್ಧನ ಶಕ್ತಿಯನ್ನು ನೀಡಿದಂತೆ ದನಕರುಗಳಿಗೆ ಆಹಾರವೂ ಆಗುತ್ತದೆ. ಹಾಗೆ ಹೆಂಗಸರು ಕಾಡಿನಲ್ಲಿ ಕಡ್ಡಿ-ಪುಳ್ಳೆಗಳನ್ನು ಆಯುವುದಕ್ಕಾಗಿ ಮಾತ್ರವಲ್ಲದೆ ಮರ ಸವರಿದರೆ ಕಾಡಿನ ಪರಿಸ್ಥಿತಿ ಸ್ಥಿರವಾಗಿ ಉಳಿಯುವುದು ಮಾತ್ರವಲ್ಲದೆ ಮರಗಳ ಉತ್ಪಾದಕತೆ ವೃದ್ಧಿಯಾಗುತ್ತದೆ. ಹಾಗೂ ಒಲೆಗೆ ಉರುವಲಾಗುತ್ತದೆ. ಇಷ್ಟೇ ಅಲ್ಲದೆ ಕಾಡು ಊರೊಟ್ಟಿನ ಸಂಬಂಧವನ್ನು ಪಡೆಯುತ್ತದೆ. ಹೀಗೆ ಜೀವಚೈತನ್ಯವಿರುವ ಸಂಪನ್ಮೂಲಗಳ ವೈವಿಧ್ಯವನ್ನು ಉಳಿಸಿಕೊಂಡು ಬರುವುದು ಹೆಂಗಸರಂತೆ ಪ್ರಕೃತಿಯನ್ನು ಬಳಸುವುದರ ನಿರ್ಣಾಯಕ ಗುಣವೇ ಆಗಿದೆ.

ಹಾಗೆ ಕಾಡಿನಲ್ಲಿ ಸಿಗುವ ಹಲವು ರೀತಿಯ ಒಣಹುಲ್ಲು ಹಾಗೂ ಬೇಸಾಯದ ಉಪ ಉತ್ಪನ್ನಗಳಾದ ಹೊಟ್ಟು, ಕಣಕಿ, ಕಂಕಿ, ತೌಡು ಮುಂತಾದವುಗಳ ಒಟ್ಟು ಸಂಗ್ರಹ, ಬಣವೆಗಳು

ಸುಗ್ಗಿಯ ಕಡೆಯ ದಿನಗಳಿಂದ ಚಳಿಗಾಲದ ಮತ್ತು ವಸಂತಕಾಲದವರೆಗೆ ಜಾನುವಾರಗಳಿಗೆ ಮೇವನ್ನಾಗಿ ಬಳಸಲಾಗುತ್ತದೆ. ಮಳೆಗಾಲದಲ್ಲಿ ಹಸಿರು ಹುಲ್ಲೆ ದನಗಳಿಗೆ ಪ್ರಮುಖ ಆಹಾರ. ಅಕ್ಟೋಬರ್, ನವೆಂಬರ್ ತಿಂಗಳುಗಳಲ್ಲಿ ಬೇಸಾಯದ ಶೇಷ ಭಾಗಗಳಾದ ಭತ್ತ, ಮಂದುವಾ, ಜಂಗೋರಾ ಹುಲ್ಲುಗಳೇ ಪ್ರಮುಖ ಮೇವು. ಹೀಗೆ ರಂಬೆಕೊಂಬೆಗಳ ಕಡ್ಡಿ–ಪುಳ್ಳೆಗಳನ್ನು ಆಯುವುದು ಮರದ ಉತ್ಪನ್ನಗಳನ್ನು ನಿರ್ವಹಿಸುವ ತಂತ್ರ ಎಂದು ನಾವು ಪರಿಗಣಿಸುವುದೇ ಇಲ್ಲ.

ಸೂಕ್ತ ಪರಿಸ್ಥಿತಿಗಳಲ್ಲಿ ರೆಂಬೆ–ಕೊಂಬೆಗಳ ಕಡ್ಡಿ–ಪುಳ್ಳೆಗಳನ್ನು ಆಯುವುದರಿಂದ ಕಾಡು ಮತ್ತಷ್ಟು ದಟ್ಟವಾಗುವುದು ಮಾತ್ರವಲ್ಲದೆ ಮೇವನ್ನು ಉತ್ಪಾದಿಸುವ ಕಾಡಿನ ಸಾಮರ್ಥ್ಯ ಜಾಸ್ತಿಯಾಗುತ್ತದೆ. ಬೇಸಾಯದ ನಂತರದ ಫಲಗಳ ರಾಶಿಯಿಂದ ದೊರೆಯುವ ಉಳಿಕೆಗಳನ್ನು (ಕಣಕಿ,ಕಂಕಿ, ಹೊಟ್ಟು ಇತ್ಯಾದಿ) ಸಂಗ್ರಹದ ಬಳಕೆ ಅಪತ್ಕಾಲದಲ್ಲಿ ದನ–ಕರುಗಳ ಯೋಗಕ್ಷೇಮಕ್ಕೆ ಕಾರಣವಾಗುತ್ತದೆ. ಹಗೆ, ಬಳತ, ಅಡಕಲಗಳಲ್ಲಿ ಸಂಗ್ರಹವಾಗುವ ಕಾಳು–ಕಡಿಗಳು ಜನರ ಸುಗಮ ಆಹಾರ ಪೂರೈಕೆಗೆ ಅನುಕೂಲವಾಗುತ್ತವೆ.

ಮೇವು, ರಾಶಿ, ಕಾಳು ಆಯುವ ಈ ಎಲ್ಲ ಹಂತಗಳೂ ಹೆಂಗಸರು, ಮಕ್ಕಳು, ದೊಡ್ಡವರು, ಚಿಕ್ಕವರು, ಹೆಂಗಸರು, ಗಂಡಸರು ಕೂಡಿ ಕೆಲಸ ಮಾಡುವ ಪ್ರವೃತ್ತಿ ಮುಖ್ಯವಾಗಿರುತ್ತದೆ. ಜೊತೆ ಜೊತೆಯಾಗಿ ಭಾಗವಹಿಸುತ್ತ ಕೆಲಸ ಮಾಡುತ್ತ ಕಲಿಯುತ್ತ ಪರಸ್ಪರ ಪರಿಣತಿ ಬೆಳೆಯುತ್ತ ಹೋಗುತ್ತದೆ. ಹೆಂಗಸರು ಪ್ರಧಾನವಾದ ಈ ಅನೌಪಚಾರಿಕ ಅರಣ್ಯ ವಿದ್ಯಾಕೇಂದ್ರಗಳು ಸಣ್ಣವು ಹಾಗೂ ವಿಕೇಂದ್ರಿಕೃತವಾದಂಥವು. ಜೀವಂತ ಸಂಪನ್ಮೂಲಗಳ ಜೀವ ಚೈತನ್ಯವನ್ನು ಉಳಿಸಿಕೊಳ್ಳುವುದು ಹೇಗೆ ಎಂಬ ತಿಳುವಳಿಕೆಯನ್ನು ಸೃಷ್ಟಿಸುತ್ತ ಜೊತೆಯವರಿಗೆ ರವಾನಿಸುತ್ತ ಸಾಗುತ್ತವೆ. ಇದಕ್ಕೆ ವಿರುದ್ಧವಾಗಿ ನಮ್ಮ ವೈಜ್ಞಾನಿಕ ಸಂಗ್ರಹ ಕ್ರಮಗಳು ಸಂಪೂರ್ಣ ಕೇಂದ್ರೀಕೃತ ಹಾಗೂ ಪ್ರಕೃತಿಗೆ ಪರಕೀಯವಾದಂಥವು. ಪ್ರಕೃತಿ ನಾಶದ ನೀತಿಯೇ ಅವುಗಳ ವಿಶೇಷ ಗಮನ. ಜೀವಂತ ಸಂಪನ್ಮೂಲಗಳನ್ನು ಮಾರಾಟದ ಸರಕಾಗಿ ಕೈತುಂಬ ಸಿಗುವ ನಗದಾಗಿ ಪರಿವರ್ತಿಸಿಕೊಳ್ಳುತ್ತದೆ. ಮೊದಲಿನದು ಸಮಷ್ಟೀ ಬೆಳವಣಿಗೆಯನ್ನು ಅವಲಂಬಿಸಿದರೆ ಎರಡನೆಯದು ವ್ಯಷ್ಟಿ ಬೆಳವಣಿಗೆಯನ್ನು ಪೂರೈಸುತ್ತದೆ.

ಹೀಗೆ ಸಾಂಪ್ರದಾಯಿಕವಾದ ಈ ಜೀವಂತ ನೆಲೆಗಳು ವಸಾಹತೀಕರಣಗೊಳ್ಳುವ ಮೂಲಕ ಜೈವಿಕವಾದ ಪ್ರತ್ಯುತ್ಪನ್ನ ಸಾಮರ್ಥ್ಯವನ್ನೇ ಕಳೆದುಕೊಂಡವು. ವಸಾಹತೀಕರಣದ ವಿರುದ್ಧ ತಮ್ಮ ಸ್ವಾಯತ್ತತೆಯನ್ನು ರಕ್ಷಿಸಿಕೊಳ್ಳಲು ಮುಂದಾದ ನೆಲೆಗಳನ್ನು ವ್ಯವಸ್ಥಿತವಾಗಿ ಹತ್ತಿಕ್ಕಲಾಯಿತು. ಉದಾಹರಣೆಗೆ ಮಧ್ಯಭಾರತದಲ್ಲಿ ವಸಾಹತುಶಾಹಿಯ ಕಾಡಿನ ದುರ್ಬಳಕೆ ವಿರುದ್ಧ ಪ್ರತಿಭಟಿಸಿದ ಗೊಂಡ ಬುಡಕಟ್ಟಿನವರನ್ನು ಗುಂಡು ಹಾರಿಸಿ ಕೊಲ್ಲಲಾಯಿತು. ತಮ್ಮ ಆಹಾರ ಹಾಗೂ ಆಯುಧಗಳನ್ನು ಸ್ವಾವಲಂಭಿ ಸ್ವಾಯತ್ತತೆಯನ್ನು ಕಿತ್ತುಕೊಂಡ ಬ್ರಿಟಿಷ್‌ರ ವಿರುದ್ಧ ಪ್ರತಿಭಟನೆಗಿಳಿದ ಹಲಗಲಿ ಬೇಡರನ್ನು ಸಜೀವ ದಹನ ಮಾಡಲಾಯಿತು. ಒಂದು ಬೃಹತ್‌ಜೀವಜಾಲವನ್ನು

ನಿಕೃಷ್ಟಗೊಳಿಸುವ ಹಾಗೂ ನಿಷ್ಕ್ರಿಯಗೊಳಿಸುವ ಇಂಥ ವಸಾಹತುಶಾಹಿ ವ್ಯಾಪಾರೀ ಗುಣವನ್ನೇ ಭಾರತದ ಅರಣ್ಯ ಸಂರಕ್ಷಣಾ ನೀತಿಗಳನ್ನಾಗಿ ಅನುಷ್ಠಾನಕ್ಕೆ ತರಲಾಯಿತು. ಈ ಗುಣವೇ ನಮ್ಮ ಎಲ್ಲಾ ರೀತಿಯಬದುಕಿನ ಕ್ರಮಗಳಲ್ಲಿ ಅಧ್ಯಯನ ಸಿದ್ಧಾಂತಗಳಲ್ಲಿ ಹುದುಗಿರುವುದನ್ನು ಗಮನಿಸಬಹುದಾಗಿದೆ. ಈ ಅಧ್ಯಯನವು ಇಂಥ ಅಪಾಯಕಾರಿ ಸಂರಕ್ಷಣಾ ನೀತಿಗಳಿಂದ ಹೊರಬಂದು ಸ್ಥಳೀಯ ಹಾಗೂ ಜೀವಜಾಲದ ವೈವಿಧ್ಯತೆಗಳನ್ನು ಅವುಗಳ ಸಾವಯವ ಸ್ಥಿತಿಗೆ ಭಂಗಬಾರದಂತೆ ನಮ್ಮ ದೇಶೀ ಜನರ ದಿನ-ಬದುಕಿನಲ್ಲಿ ಅಳವಡಿಸಿಕೊಂಡ ಸ್ಥಳೀಯ ಸಂರಕ್ಷಣಾ ತಾಂತ್ರಿಕತೆ ಕುರಿತು ಚಿಂತಿಸುತ್ತದೆ.

ಮನುಷ್ಯಕುಲವನ್ನು ಪೋಷಿಸುವ ತತ್ವಗಳು ಪ್ರಭುತ್ವ ನಿಭಾಯಿಸುವ ಕೇಂದ್ರೀಕೃತ ನೆಲೆಗಳಿಗಿಂತ ಉನ್ನತವಾದಂಥವು ಹಾಗೂ ಜೈವಿಕವಾದಂಥವು. ಪ್ರಭುತ್ವದ ನೆಲೆಗಳು ದೇಶೀ ಚಿಂತನಾ ನೆಲೆಗಳನ್ನು ಅಪಭ್ರಂಸಗೊಳಿಸುತ್ತವೆ. ಆಹಾರ ಎನ್ನುವುದು ಕೇವಲ ಜೇಬಿನಲ್ಲಿ ಹಣ ಇರುವವರ ಹಕ್ಕಲ್ಲ. ಆಹಾರ ಹಸಿದಿರುವವರೆಲ್ಲರ ಅತ್ಯಂತ ಮೂಲಭೂತ ಹಕ್ಕು. ಆಹಾರ ಸಂಗ್ರಹ ಹಂಚಿಕೊಂಡು ತಿನ್ನುವುದು ಉತ್ಪಾದಕ ಚಟುವಟಿಕೆಗಳಲ್ಲಿ ಸಾಮೂಹಿಕವಾಗಿ ಪಾಲ್ಗೊಳ್ಳುವುದು ಜೀವನ ನಿರ್ವಹಣೆ ಮಾಡುವುದು ಮುಂತಾದ ನೈತಿಕತೆಯನ್ನು ದಿನಂಪ್ರತಿ ಚಟುವಟಿಕೆಗಳ ಮೂಲಕ ಹೆಂಗಸರು ಉಳಿಸಿಕೊಳ್ಳುತ್ತಾರೆ. ಅಷ್ಟೆ ಅಲ್ಲ ಗಂಡಸು ಪ್ರಧಾನ ಅಭಿವೃದ್ಧಿ ತಂದೊಡ್ಡುವ ಅಡಚಣೆಗಳನ್ನು ಮೀರಿ ನಿಲ್ಲುವ ಶಕ್ತಿಯೂ ಇಂಥವುಗಳಿಗಿರುತ್ತದೆ ಎನ್ನುವುದು ಗಮನಾರ್ಹ.

ಪ್ರಕೃತಿಯ ಸಂಪನ್ಮೂಲವನ್ನು ಊರೊಟ್ಟಿನ ಸಂಪನ್ಮೂಲವಾಗಿ ತಿರುಗಿ ಪಡೆದುದಕ್ಕೆ ಪ್ರಕೃತಿಯ ಶಕ್ತಿ ಹಾಗೂ ಹೆಂಗಸರ ಶಕ್ತಿಗಳೇ ಆಧಾರ. ಪ್ರಕೃತಿ ಹಾಗೂ ಹೆಂಗಸರ ಶಕ್ತಿಗಳೇ ಇಲ್ಲಿ ಬಂಡವಾಳ. ನೀರು, ಆಹಾರ, ಉರುವಲು, ಕೃಷಿ ಪರಿಕರಗಳ ಆಹಾರ ಧಾನ್ಯಗಳ, ಬಟ್ಟೆಬರೆಗಳು ಇವೆಲ್ಲವೂ ಸ್ಥಳೀಯ ಹಾಗೂ ದೈನಂದಿನ ಅಗತ್ಯಗಳೇ ಆಗಿವೆ. ಅವಶ್ಯಕ ಹಾಗೂ ಇಂಥ ಜೀವಂತ ಸಂಪನ್ಮೂಲಗಳ ಸಂಘಟನಾತತ್ವ ಇಲ್ಲಿದೆ. ಅಂದರೆ ತಮ್ಮ ತಮ್ಮ ಕುಟುಂಬದ ಅಗತ್ಯಗಳನ್ನು ಅವರು ಗ್ರಹಿಸಿಕೊಂಡ ರೀತಿಯೇ ಇಲ್ಲಿ ಮಾರ್ಗದರ್ಶನವಾಗಿದೆ. ಕೃಷಿ ಹಾಗೂ ಕಾಡು ಉತ್ಪನ್ನಗಳನ್ನು ಅವಲಂಬಿಸಿರುವ ಮಹಿಳೆಯರು ಮೇವು ಮಾಡಲು ಹೋದಾಗ ಮೇವಿನ ಮೊದಲ ಹಿಡಿಯನ್ನು ಹಸುರಿನ ದೇವರಿಗೆ ಅರ್ಪಿಸುವ, ಚರಗ ಅಥವಾ ಭೂತಬಲಿ ಸಂದರ್ಭದಲ್ಲಿ ಭೂದೇವಿಗೆ ಎಡೆ ಅರ್ಪಿಸುವ ಕ್ರಮಗಳು ಸಂರಕ್ಷಣಾ ಚಟುವಟಿಕೆಗಳ ಸಂಕೇತವಾಗಿವೆ. ಕಾಡಿನ ಹೆಣ್ಣುಗುಣಗಳನ್ನು ತಿರುಗಿ ಪಡೆಯುವ ಈ ಚಟುವಟಿಕೆಗಳು ಕೊಟ್ಟು ತೆಗೆದುಕೊಳ್ಳುವ ಗುಣವುಳ್ಳವು. ಪ್ರಕೃತಿಯ ಜೀವಂತಿಕೆಯ ಸಾವಯವ ಅಂಶವಾದ ವೈವಿಧ್ಯ ಮತ್ತು ಸಮಗ್ರತೆಗಳು ಕಾಡಿನ ಹೂ, ಹಣ್ಣು, ಹಸಿರು, ದೊಡ್ಡಪುಟ್ಟ ಸಸ್ಯಗಳು ಜೀವವನ್ನು ಪೋಷಿಸುವ ಹಾಗೂ ಪುನಃಬೆಳೆಯುವ ಸಾಧ್ಯತೆಯನ್ನು ತೆರೆದು ತೋರುತ್ತವೆ. ನೈಸರ್ಗಿಕ ರೂಪದಲ್ಲಿಯೇ ಆಗಲೀ ಬೇಸಾಯದ ಚಟುವಟಿಕೆಗಳ ಜೀವಜಾಲದ ಸ್ವರೂಪದಲ್ಲಿಯೇ

ಆಗಲೀ ಕಾಡು ಹಾಗೂ ನಾಡಿನ ಜೀವಂತ ಸಂಪನ್ಮೂಲಗಳ ವೈವಿಧ್ಯ ಉಳಿಯಬೇಕಾದದ್ದು ಅತ್ಯಗತ್ಯ. ಮಣ್ಣು ಮತ್ತು ನೀರಿನ ಸಂರಕ್ಷಣೆ ಕಾಡಿನ ಮೇಲೆ ಅವಲಂಬಿತವಾದ ಜನರ ವೈವಿಧ್ಯಮಯವಾದ ಅಗತ್ಯಗಳನ್ನು ಪೂರೈಸುವುದಕ್ಕೆ ಹಾಗೂ ತನ್ನನ್ನು ತಾನು ಪುನರುತ್ಪಾದಿಸಿಕೊಳ್ಳುವ ಪ್ರಕೃತಿಯ ವೈವಿಧ್ಯಮಯ ಅಗತ್ಯಗಳಿಗೆ ಇದು ಅತ್ಯಗತ್ಯ.

ಇಂಥ ವೈವಿಧ್ಯತೆಯ ನಾಶ ಜೀವಪೋಷಣೆ ಕ್ರಿಯೆಯ ಮೇಲೆ ಇದ್ದ ಹೆಂಗಸರ ನಿಯಂತ್ರಣವನ್ನು ನಾಶಮಾಡಿದೆ ಸಾಮಾಜಿಕ ಅರಣ್ಯ ನೀತಿ, ಮೀಸಲು ಅರಣ್ಯ, ಹಸಿರು ಕ್ರಾಂತಿ, ಬಂಜರು ಭೂಮಿ ಅಭಿವೃದ್ಧಿ ಇತ್ಯಾದಿ ಕೃಷಿ ಹಾಗೂ ಪ್ರಕೃತಿ ಅಭಿವೃದ್ಧಿಯ ಆಧುನಿಕ ಪರಿಕಲ್ಪನೆಗಳು ಬೇಸಾಯ ಹಾಗೂ ಅರಣ್ಯ ನೀತಿಗಳನ್ನು ತಪ್ಪುದಾರಿ ಹಿಡಿಸಿವೆ. ಇದರಿಂದ ಕೈಗಾರಿಕೆಗಳಿಗೆ ಹೊಸ ಕಚ್ಚಾಮಾಲು ಮತ್ತು ಸಂಪನ್ಮೂಲಗಳು ದೊರೆತವಷ್ಟೆ. ಪ್ರಕೃತಿ ಹಾಗೂ ಹೆಂಗಸರ ಮಧ್ಯ ಹೊಸ ದಾರಿದ್ರ್ಯ ಹುಟ್ಟಿಕೊಂಡಿತು. ಉತ್ಪಾದನೆಯ ವೈವಿಧ್ಯಮಯ ಮಾರ್ಗಗಳೇ ನಾಶಗೊಂಡ ಕಾರಣ ನೀರು ಆಹಾರ ಎಂಬ ಪೋಷಕಗಳನ್ನು ಒದಗಿಸಿದ ಸಮಾಜಗಳೇ ಹೊಸ ಜೀವ ತಡೆಯುತ್ತಿದ್ದ ಪರಿಸ್ಥಿತಿ ನಿರ್ಮಾಮವಾದಂತಾಯಿತು. ಜೀವನವು ತಾಳಿಕೆ ಬರುವಂತೆ ಉಳಿಯಲು ಅಗತ್ಯವಿರುವ ಪೋಷಣೆಗಳನ್ನು ಒದಗಿಸುವ ಮಾರ್ಗವಾಗಿ ನಮ್ಮಲ್ಲಿ ಸಂಗ್ರಹ ಹಾಗೂ ಸಂರಕ್ಷಣಾ ಕ್ರಮಗಳಿದ್ದವು. ಪ್ರಕೃತಿಯ ಸಂಪತ್ತನ್ನು ಪ್ರಕೃತಿಯೊಡನೆ ಹಂಚಿಕೊಳ್ಳುವ ಜೀವನದ ಮೂಲಭೂತ ಅಗತ್ಯಗಳಿಗಾಗಿ ಪ್ರಕೃತಿಯ ಸಂಪತ್ತನ್ನು ಬಳಸುವ ಹಾಗೂ ಉಳಿಸುವಲ್ಲಿ ಹೆಂಗಸರ ಪಾತ್ರ ಪ್ರಧಾನ ವಾದದ್ದಾಗಿತ್ತು.

ಇಂದಿನ ಕೌಟುಂಬಿಕ ಮಟ್ಟದಲ್ಲಿ ನಡೆಯುವ ಹೆಚ್ಚಿನ ಪೋಷಣೆ ಹಾಗೂ ಪರಿವರ್ತನೆಯ ಕ್ರಮಗಳು ಹೆಂಗಸರು ಪ್ರಧಾನವಾದ ತಾಂತ್ರಿಕ ಚಟುವಟಿಕೆಗಳೇ ಆಗಿವೆ. ವಸ್ತುಸಂಗ್ರಹಾಲಯ, ಪುಸ್ತಕ ಭಂಡಾರದಂಥ ಆಧುನಿಕ ಪರಿಕಲ್ಪನೆಗಳು ಇಂಥ ಜೈವಿಕ ನೆಲೆಗಳಲ್ಲಿ ವಿಕಾಸ ಪಡೆಯುವುದು ಇಂದು ಅಗತ್ಯವಾಗಿದೆ.

ಜ್ಞಾನ ಸಾಮಗ್ರಿಗಳ ಸಂಗ್ರಹ, ಸಂರಕ್ಷಣೆ ಎನ್ನುವುದು ಕೂಡ ಅರಿವಿನ ಶೇಖರಣೆ, ಪರಿವರ್ತನೆ ಹಾಗೂ ಪುನರ್‌ವ್ಯಾಖ್ಯಾನದ ನೆಲೆಗಾಗಿಯೇ ನಡೆದು ಬಂದಿದೆ. ವಿಶೇಷವಾಗಿ ನವೋದಯ ಸಂದರ್ಭದ ದೇಸೀ ವಿದ್ವಾಂಸರ ಕೆಲಸಗಳಲ್ಲಿ ಇಂಥ ಉತ್ಪಾದಕ ಹಾಗೂ ಸಂವರ್ಧಿತ ಮೌಲ್ಯಗಳನ್ನು ಕಾಣುತ್ತೇವೆ. ಮುದ್ರಣ ಪ್ರಧಾನ ಮಿಷನರಿಗಳ ಆರ್ಥಿಕ ಸಬಲತೆ ಹಾಗೂ ಪ್ರಸರಣದ ಗಾಳಿಯಲ್ಲಿ ಇಂಥ ದೇಸೀತನದ ಅಧ್ಯಯನ ಮಾದರಿಯ ಸೂಚನೆಗಳು ಗೌಣವಾದವು.

ವಿಶೇಷವಾಗಿ ಮಧ್ಯಕಾಲೀನ ಕನ್ನಡ ಸಾಹಿತ್ಯ ಚರಿತ್ರೆಯನ್ನು ಗಮನಿಸಿದಾಗ ಕಂಡುಬರುವ ಸಂಕಲನ, ಸಂಪಾದನೆ, ಸಂಗ್ರಹಣೆ ಇವೆಲ್ಲ ಒಂದು ಸಹವರ್ತಿ ನೆಲೆಯಲ್ಲಿ ಬೆಳೆದು ಬಂದದ್ದು ಗೋಚರವಾಗುತ್ತದೆ. ಇಲ್ಲಿ ಕೃತಿ ಸಂಪಾದನೆಗಿಂತ ಅದು ಮರುಬಳಕೆಗೆ, ಮರುನಿರ್ಮಾಣಕ್ಕೆ, ಹೊಸ ಸಾಂಸ್ಕೃತಿಕ ವ್ಯಾಖ್ಯಾನಗಳಿಗೆ ದಾರಿತೋರಿದ್ದು ಸ್ಪಷ್ಟವಾಗುತ್ತದೆ. ಅಕ್ಷರದ ಅಹಂಕಾರಗಳು

ಇಂಥ ಪುನರುತ್ಪತ್ತಿ ಸಾಮರ್ಥ್ಯವನ್ನು ಹೊಂದಿದ ಸಂಪ್ರದಾಯವನ್ನು ಘಾಸಿಗೊಳಿಸಿದವು. ಕೇವಲ ಪಾಂಡಿತ್ಯ ಪ್ರಧಾನತೆಯನ್ನು ಹೇಳುವ ಕೆಲವು ಕೃತಿಗಳು ಮುಂಚೂಣಿಗೆ ತರುವ ಮೂಲಕ ಜನಮಾನಸದೊಂದಿಗೆ ಸಾವಯವಶೀಲತೆಯನ್ನು ಹೊಂದದ ಆಕೃತಿಗಳನ್ನು ನಿರಾಕರಿಸಲಾಯಿತು.

ಕನ್ನಡ ಸಂಸ್ಕೃತಿಯಲ್ಲಿ ಜ್ಞಾನವನ್ನು ಹಲವು ಬಗೆಯಲ್ಲಿ ಸಂಗ್ರಹಿಸಿ, ಸಂರಕ್ಷಿಸಿ, ಸಂವರ್ಧಿಸುತ್ತ ಬರಲಾಗಿದೆ. ಓದಲು, ಓದಿಸಿಕೊಳ್ಳಲು, ಕೇಳಲು, ಕರ್ಮ ಶಮನಕ್ಕಾಗಿ, ಸಂತಾನಕ್ಕಾಗಿ, ದಾನಕ್ಕಾಗಿ ಹಲವು ಬಗೆಯಲ್ಲಿ ಲಿಪಿ ಹಾಗೂ ಮೌಖಿಕ ಪಾತಳಿಯಲ್ಲಿ ಬೆಳೆಸುತ್ತ ಬರಲಾಗಿದೆ. ಇದರಂಗವಾಗಿಯೇ ಚಂಪೂ, ರಗಳೆ, ಕೀರ್ತನೆ, ಷಟ್ಪದಿ, ಸಾಂಗತ್ಯ ರೂಪದ ಛಂದೋಲಯಗಳು ಹುಟ್ಟಿದವು. ಲಾಕ್ಷಣಿಕ ಗ್ರಂಥಗಳು ಆಗಮಿಕ ಹಾಗೂ ಲೌಕಿಕ ಕೃತಿಗಳು ಸುರಕ್ಷಿತ ನಿರ್ವಹಣೆಯಲ್ಲಿ ಮೂಡಿಬಂದವು. ರಾಜನ ಸಪ್ತ ಸಂತಾನಗಳಲ್ಲಿ ಜ್ಞಾನ ಸಾಮಗ್ರಿಗಳ ಸಂರಕ್ಷಣೆಯ ಕೆಲಸವೂ ಒಂದಾಗಿತ್ತು ಎನ್ನುವುದು ವಿಶೇಷ.

## ೨.೨. ಜ್ಞಾನ ಪರಿಕರಗಳ ಸಂಗ್ರಹ

ಪಾರಂಪರಿಕ ಸಂರಕ್ಷಣೆಯ ಸಂಗ್ರಹಿತ ವಸ್ತುಗಳಲ್ಲಿ ದೀರ್ಘಾವಧಿಯ ಜ್ಞಾನ ಬಳಕೆಯ ವಸ್ತುಗಳಾದ ಹಸ್ತಪ್ರತಿಗಳು, ಶಾಸನಗಳು, ತಾಮ್ರ ಪಟಗಳು, ನಾಣ್ಯಗಳು ಮತ್ತು ಸ್ಮಾರಕಗಳು ಮುಖ್ಯವಾದವುಗಳು. ಒಂದು ನಾಡಿನ ಚರಿತ್ರೆಯ ಆ ನಾಡಿನ ಜನರ ಬದುಕನ್ನು ಭೌಗೋಳಿಕವಾಗಿ, ಚಾರಿತ್ರಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಒಟ್ಟಾರೆ ಎಲ್ಲ ಪಾರ್ಶ್ವಗಳ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವುದಾಗಿ ಈ ನಿಟ್ಟಿನಲ್ಲಿ ಆ ಕಾರ್ಯವನ್ನು ನಮ್ಮವರು ಮಾಡಿ ತೋರಿಸಿದ್ದಾರೆ.

### ೨.೨.೧. ಹಸ್ತಪ್ರತಿಗಳು

ಪ್ರಾಚೀನ ಪುಸ್ತಕಗಳನ್ನೇ ಹಸ್ತಪ್ರತಿಗಳು ಎನ್ನಲಾಗುತ್ತದೆ. ಆದರೆ ಇವು ಪುಸ್ತಕಗಳಂತೆ ಮುದ್ರಣಗೊಂಡವುಗಳಲ್ಲ. ಕೈಯಿಂದ ಬರೆದಂಥವುಗಳು. ಮೂಲತಃ ಈ ಕಾರಣಕ್ಕಾಗಿಯೇ ಇವು ಹಸ್ತಪ್ರತಿಯೆನಿಸಿಕೊಳ್ಳುತ್ತವೆ. ನಮ್ಮ ದೇಶ ನಾನಾ ಭಾಷೆಗಳಲ್ಲಿ ಸಾವಿರಾರು ಸಂಖ್ಯೆಗಳಲ್ಲಿ ಹಸ್ತಪ್ರತಿಗಳು ದೊರಕಿವೆ ದೊರಕುತ್ತಲಿವೆ. ಇವು ಬಸದಿ, ಮಠಮಾನ್ಯಗಳಲ್ಲಿ ಅಲ್ಲದೇ ವೈಯಕ್ತಿಕ ಹಾಗೂ ವಿಶ್ವವಿದ್ಯಾಲಯಗಳಂಥ ಸಾರ್ವಜನಿಕ ಸಂಸ್ಥೆಗಳಲ್ಲಿ ಸಂಗ್ರಹಗೊಂಡಿವೆ. ಉಪಲಬ್ಧವಾದ ಹಸ್ತಪ್ರತಿಗಳ ಸಂಖ್ಯಾಮಾನದಿಂದ ಭರತ ಖಂಡದ ಹಸ್ತಪ್ರತಗಳಲ್ಲಿ ಮೊದಲ ಸ್ಥಾನ ಸಂಸ್ಕೃತದ್ದು. ಅನಂತರದ ಸ್ಥಾನಗಳು ಕ್ರಮವಾಗಿ ಪ್ರಾಕೃತ, ತಮಿಳು ಹಾಗೂ ಕನ್ನಡ ಹಸ್ತಪ್ರತಿಗಳಿಗೆ ಸಲ್ಲುತ್ತದೆ. ಇಂಥ ಹಸ್ತಪ್ರತಿಗಳ ಮೂಲಕವೇ, ಕನ್ನಡಿಗರು ತೌಕಿಕ, ಪರತೌಕಿಕ, ಜ್ಞಾನವನ್ನು ಕಾಲ ಕಾಲಕ್ಕೆ ಕಾಯ್ದು ಕೊಂಡು ಬಂದಿದ್ದಾರೆ ಈ ಹಸ್ತಪ್ರತಿಗಳನ್ನು ಪ್ರತಿ ಮಾಡಿದವರು ಅದೆಷ್ಟು ಕಷ್ಟದಿಂದ

ಜ್ಞಾನದೀವಿಗೆಗಳಂತಿರುವ ಕೃತಿಗಳನ್ನು ನೀಡಿದ್ದಾರೆ. ಎಂಬುದನ್ನು ಅವರೇ ಹೇಳಿರುವಂತೆ.

ಭಗ್ನಪೃಕ್ಷ ಕಟಿಗ್ರೀವಾ ಬದ್ನ ದೃಷ್ಟಿರಧೋಮುಖಂ
ಕಷ್ಟೇನ ಲಿಖಿತಂ ಶಾಸ್ತ್ರಂ ಯತ್ನೇನ ಪರಿಪಾಪಯ[೯]
ಎನ್ನುವ ಮಾತು ಶ್ರುತಪಡಿಸುತ್ತವೆ.

ಹಸ್ತಪ್ರತಿಗಳಲ್ಲಿ ಕಂಡು ಬರುವ ಸಾಲುಗಳನ್ನು ನೋಡಿದರೆ. ಅವುಗಳ ರಕ್ಷಣೆಯಲ್ಲಿ ಪ್ರತಿಕಾರರಿಗಿದ್ದ ಆಸಕ್ತಿ ಸದುಪಯೋಗವಾಗಬೇಕೆಂಬುದರಲ್ಲಿ ಅವರಿಗಿದ್ದ ಕಾಳಜಿ ಅದಷ್ಟು ತೀವ್ರತರ ಎಂಬುದು ವೇದ್ಯವಾಗದಿರುದು, ಭಾರತಕ್ಕೆ ಮೋಜಣಿದಾರನಾಗಿ ಬಂದ, ಕರ್ನಲ್‌ಮೆಕೆಂಜಿ ಅವರು ಸಂಗ್ರಹಿಸಿದ ಹಸ್ತಪ್ರತಿಗಳು ೧೮೫೮ರಲ್ಲಿ ಮದರಾಸು ಪ್ರಾಚ್ಯಕೋಶಾಗಾರದಲ್ಲಿ ಸೇರ್ಪಡೆಯಾದವು ಮೈಸೂರಿನಲ್ಲಿ ೧೮೮೧ರಲ್ಲಿ ಓರಿಯಂಟಲ್ ಲೈಬ್ರರಿ ಇದಕ್ಕಾಯೇ ಸ್ಥಾತಪಿತವಾಯಿತು ಹೀಗೆಯೆ ಇನ್ನೂ ಹಲವಾರು ಸಂಘಸಂಸ್ಥೆಗಳು ಈ ಕೆಲಸದಲ್ಲಿ ನಿರತವಾದವು ಅವುಗಳನ್ನು ಕ್ರಮವಾಗಿ[೬].

೧. ಸರ್ಕಾರಿ ಹಸ್ತಪ್ರತಿ ಭಂಡಾರಗಳು

೨. ಸಾರ್ವಜನಿಕ ಹಸ್ತಪ್ರತಿ ಭಂಡಾರಗಳು

೩. ಮಠ-ಮಾನ್ಯಗಳ ಹಸ್ತಪ್ರತಿ ಭಂಡಾರಗಳು ಇವು ಪ್ರಮುಖವಾದವುಗಳು,

**೧. ಸರ್ಕಾರಿ ಹಸ್ತಪ್ರತಿ ಭಂಡಾರಗಳು :**

ನಮ್ಮ ಪ್ರಾಚೀನರ ಜ್ಞಾನ ಭಂಡಾರವೇ ಈ ಹಸ್ತಪ್ರತಿಗಳಾದರೂ ಇದನ್ನು ಗ್ರಂಥ ಸಂಪಾದನೆಯಲ್ಲಿ ಮಾತ್ರ ಗುರುತಿಸಿಕೊಂಡುದರ ಫಲವಾಗಿ ಸಾಹಿತ್ಯ ವಲಯದಲ್ಲಿ ಇಂದು ಮುಗಿದು ಹೋದ ಅಧ್ಯಯನವೆನಿಸಿದೆ. ಸರ್ಕಾರದ ಕಾನೂನಿನ ಎಲ್ಲ ಪ್ರಾಚ್ಯ ವಸ್ತುಗಳ ಅಡಿಯಲ್ಲಿ ಈ ಹಸ್ತಪ್ರತಿ ಬಂದರೂ ಇದನ್ನು ಅಷ್ಟು ಮುಖ್ಯವಾಗಿ ಪರಿಗಣಿಸುವುದಿಲ್ಲ. ಅನಾಯಾಸವಾಗಿ ಸಿಕ್ಕರೆ ವಸ್ತು ಸಂಗ್ರಹಾಲಯದಲ್ಲಿ ಪ್ರದರ್ಶಿಸುವುದನ್ನು ಬಿಟ್ಟರೆ ಬೇರೆನನ್ನೂ ಇದರ ಬಗ್ಗೆ ಯೋಚಿಸುವದಿಲ್ಲ, ಆದ್ದರಿಂದಲೇ ಇವು ಒಂದು ರೀತಿಯಲ್ಲಿ ನಿರ್ಲಕ್ಷಿತ ಸ್ಮಾರಕಗಳೆನಿಸಿವೆ.

ಸರಕಾರಿ ಹಸ್ತಪ್ರತಿ ಭಂಡಾರದ ಇತಿಹಾಸ ಪ್ರಾರಂಭವಾಗುವುದು ಬ್ರಿಟಿಷ ಅಧಿಕಾರಿಗಳಾಗದ ಕರ್ನಲ್‌ಮೆಕಂಜಿ, ಸಿ.ಪಿ.ಬ್ರೌನ್, ಮುಂತಾದವರ ಮೂಲಕ. ೧೮೦೯ರಿಂದ ೧೯೭೫ರ ಅವಧಿಯಲ್ಲಿ ಅವರು ನಮ್ಮ ನಾಡಿನಲ್ಲಿ ಸಂಚರಿಸಿ ಜನರನ್ನು ಸಂಪರ್ಕಿಸಿ ಅವರಿಗೆ ಈ ಬಗೆಗೆ ತಿಳುವಳಿಕೆ ಮಾಡಿಸಿ ಅಪಾರವಾದವುಗಳನ್ನು ಇತರ ಪ್ರಾಚ್ಯವಸ್ತುಗಳನ್ನು ಸಂಗ್ರಹಿಸುವ ಒಂದು ಆಂದೋಲನವನ್ನು ಕೈಗೊಂಡುದರ ಫಲವಾಗಿ ಪ್ರಾಚೀನ ಹಸ್ತಪ್ರತಿಗಳ ಮೌಲ್ಯದ ಅರಿವಾಯಿತು. ಇದೇ ಸಂದರ್ಭದಲ್ಲಿ ಪಂಡಿತ ರಾಧಾಕೃಷ್ಣರು ಕ್ರಿ.ಶ.೧೮೯೮ ಮೇ ನಲ್ಲಿ ವಿಕ್ಟೋರಿಯ ಸರ್ಕಾರಕ್ಕೆ ಒಂದು ಪತ್ರವನ್ನು ಬರೆದು ಈ ಬಗೆಗಿನ ಹೆಚ್ಚಿನ ಕಾಳಜಿಗೆವಹಿಸಿ ವ್ಯವಸ್ಥಿತ ಇಲಾಖೆಯೊಂದರ

ಸ್ಥಾಪನೆಯ ಸಲಹೆಯನ್ನು ನೀಡಿದರು. ಇದನ್ನು ಸ್ವೀಕರಿಸಿದ ಸರ್ಕಾರ ತಜ್ಞರಸಮಿತಿಯೊಂದನ್ನು ನೇಮಿಸಿತಲ್ಲದೆ, ೧೮೭೦ರಲ್ಲಿ "ಗಾರ್ನ್‌ಮೆಂಟ್ ಓರಿಯೆಂಟಲ್ ಮ್ಯಾನ್ ಸ್ಕ್ರಿಪ್ಟ ಲೈಬ್ರರಿ" ಎಂಬ ಸಂಸ್ಥೆಯನ್ನು ಮದ್ರಾಸಿನಲ್ಲಿ ಅಧಿಕೃತವಾಗಿ ತೆರೆದು ಆವರೆಗಿನ ಎಲ್ಲಾ ಸಂಗ್ರಹವನ್ನು ವ್ಯವಸ್ಥಿತಗೊಳಿಸಿತು ಇದೇ ಭಾರತದಲ್ಲಿ ಪ್ರಾರಂಭವಾದ ಪ್ರಪ್ರಥಮ ಸರ್ಕಾರಿ ಹಸ್ತಪ್ರತಿ ಭಂಡಾರವಾದರೂ. ವಾರಣಾಸಿಯ ಸಂಸ್ಕೃತ ಕಾಲೇಜಿನ "ಭಂಡಾರ ಸರಸ್ವತಿ ಭವನ ಲೈಬ್ರರಿ" ಇದಕ್ಕೂ ಮೊದಲೇ ೧೭೯೧ರಲ್ಲಿ ಸ್ಥಾಪನೆಯಾಗಿ ಸಂಸ್ಕೃತ ಹಸ್ತಪ್ರತಿಗಳನ್ನು ಆಧುನಿಕರಣಗೊಳಿಸಿದ್ದು ಮರೆಯುವಂತಿಲ್ಲ.

ಕರ್ನಾಟಕದಲ್ಲಿ ೧೮೯೭ರಲ್ಲಿ ಬ್ರಿಟೀಷ ಗವರ್ನಮೆಂಟ್ 'ಓರಿಯೆಂಟಲ್ ಲೈಬ್ರರಿ' ಎಂಬ ಹೆಸರಿನಲ್ಲಿ ಈ ಸಂಸ್ಥೆಯನ್ನು ಸ್ಥಾಪಿಸಿದರು ಆಗ ಇದರ ಉದ್ದೇಶ ಹಸ್ತಪ್ರತಿಗಳನ್ನು ಸಂಗ್ರಹಿಸಿ, ಸಂಶೋಧಿಸುವುದಾಗಿತ್ತು. ನಂತರ ಅವಧಿಯಲ್ಲಿ ೧೯೧೯ರಲ್ಲಿ ಮೈಸೂರು ವಿಶ್ವವಿದ್ಯಾಲಯ ಆರಂಭವಾದಾಗ ಅದರ ಒಂದು ಭಾಗವಾಗಿ ಈ ಲೈಬ್ರರಿ ಸೇರ್ಪಡೆಯಾಗಿತು ೧೯೪೩ರಲ್ಲಿ ಇದನ್ನು "ಓರಿಯಂಟಲ್ ರೀಸರ್ಚ' ಇನ್‌ಸ್ಟಿಟ್ಯೂಟ್", (ಪ್ರಾಚ್ಯಾ ವಿದ್ಯಾ ಸಂಶೋಧನಾಲಯ) ಎಂದು ಹೆಸರಿಸಿ ಇದನ್ನೊಂದು ಅಧಿಕೃತವಾಗಿ ಸಂಶೋಧನಾ ಸಂಸ್ಥೆಯಾಗಿ ಪರಿವರ್ತಿಸಲಾಯಿತು.

೨. ೧೯೩೮ರಲ್ಲಿ ದಕ್ಷಿಣ ಕರ್ನಾಟಕದಲ್ಲಿ ಆದ "ಓರಿಯೆಂಟಲ್ ರೀಸರ್ಚ ಇನ್‌ಸ್ಟಿಟ್ಯೂಟ್" ಪ್ರಭಾವದಿಂದ ಇದೇ ಬಗೆಯ ಚಟುವಟಿಕೆಗಳಿಗಾಗಿ ಉತ್ತರ ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ ಧಾರವಾಡದಲ್ಲಿ 'ಕನ್ನಡ ಸಂಶೋಧನ' ಸಂಸ್ಥೆ, ಪ್ರಾರಂಭವಾಯಿತು. ೧೯೬೨ರಲ್ಲಿ ಡಾ.ಎಂ.ಎಂ.ಕಲ್ಬುರ್ಗಿಯವರು ಸಂಶೋಧನ ಸಂಸ್ಥೆಯ ಎಲ್ಲ ಹಸ್ತಪ್ರತಿಗಳನ್ನು ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗಕ್ಕೆ ಸೇರಿಸಿದ ನಂತರ ಈ ಸಂಸ್ಥೆ ಸ್ಥಗಿತವಾಯಿತು.

೩. ೧೯೬೬ರಲ್ಲಿ ಸ್ಥಾಪನೆಯಾದ ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ ಕ್ಷೇತ್ರ ಕಾರ್ಯದ ಮೂಲಕ ಇನ್ನಷ್ಟು ಮೌಲಿಕವಾದ ಹಸ್ತಪ್ರತಿಗಳನ್ನು ಸಂಗ್ರಹಿಸಿತು. ಈವರೆಗೆ ಸಂಗ್ರಹವಾಗಿರುವ ಹಸ್ತಪ್ರತಿಗಳ ಸಂಖ್ಯೆ ೫೦೦೦ವನ್ನು ದಾಟಿದೆ. ಇದು ಸಂಗ್ರಹಣಾ ಇತಿಹಾಸದಲ್ಲಿ ಅದ್ವಿತಿಯವಾಗಿದೆ.

೪. ಕನ್ನಡ ಅಧ್ಯಯಪೀಠ (ಧಾರವಾಡ ವಿಶ್ವವಿದ್ಯಾಲಯ) ಈ ಕನ್ನಡ ಅಧ್ಯಯನ ಪೀಠ ೧೯೭೨ರಲ್ಲಿ ವಚನ ಸಾಹಿತ್ಯ ಪ್ರಕಟನ ಯೋಜನೆಯೊಂದನ್ನು ಕೈಗೆತ್ತಿಕೊಂಡು ಅದರ ಅಂಗವಾಗಿ ಹಸ್ತಪ್ರತಿ ಸಂಗ್ರಹ ಕಾರ್ಯವನ್ನು ನಡೆಸಿರುವುದು ಕಂಡು ಬರುತ್ತದೆ. ಸುಮಾರು ಹತ್ತು ವರ್ಷ ಸತತವಾಗಿ ಉತ್ತರ ಕರ್ನಾಟಕದ ಹಲವು ಜಿಲ್ಲೆಗಳಲ್ಲಿ ಕ್ಷೇತ್ರಕಾರ್ಯನೆಡೆಸಿ ೫೦೦೦ಕ್ಕೂ ಅಧಿಕ ಹಸ್ತಪ್ರತಿಗಳನ್ನು ಸಂಗ್ರಹಿಸಿರುವ ಈ ವಿಭಾಗ, ಫ.ಗು.ಹಳಕಟ್ಟಿ ಅವರು ಸಂಗ್ರಹಿಸಿದ್ದ ೧೦೦೦ ಹಸ್ತಪ್ರತಿಗಳನ್ನು ಅವರ ಮಕ್ಕಳಿಂದ ಪಡೆಯುವ ಮೂಲಕ ತನ್ನ ಭಂಡಾರದ ಮೌಲ್ಯವನ್ನು ಹೆಚ್ಚಿಸಿದ್ದಲ್ಲದೆ ೧೯೬೨ರಲ್ಲಿ ಕನ್ನಡ ಸಂಶೋಧನೆಯಲ್ಲಿ ಧೋಳು ಹಿಡಿಯುತ್ತಿದ್ದ ೩೦೦೦

ಹಸ್ತಪ್ರತಿಗಳನ್ನು ವಿಶ್ವವಿದ್ಯಾಲಯದ ಹಸ್ತಪ್ರತಿ ಭಂಡಾರಕ್ಕೆ ಸೇರಿಸಿ ಕೊಳ್ಳುವ ಮೂಲಕ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರದ ಹಸ್ತಪ್ರತಿ ಸಂಖ್ಯೆ ೮೦೦೦ವನ್ನು ದಾಟಿದೆ.

೫. ಕನ್ನಡ ಅಧ್ಯಯನ ಕೇಂದ್ರ ಬೆಂಗಳೂರು ವಿ.ವಿ. ೧೯೭೧ರಲ್ಲಿ ವಿಶ್ವವಿದ್ಯಾಲಯನಿಲಯ ದೊಂದಿಗೆ ಆರಂಭವಾದ ಕನ್ನಡ ವಿಭಾಗವು ಪ್ರತ್ಯೇಕ ಅಧ್ಯಯನ ಕೇಂದ್ರವಾಗಿ ರೂಪಗೊಂಡ ಬಿ.ಶಿವಮೂರ್ತಿ ಹಸ್ತಪ್ರತಿಗಳನ್ನು ಪಡೆಯುವ ಮೂಲಕ ಹಸ್ತಪ್ರತಿ ಸಂಪಾದನಾ ವಿಭಾಗವನ್ನು ಪ್ರಾರಂಭಿಸಿತು. ಡಾ.ಜಿ.ಎಸ್.ಶಿವರುದ್ರಪ್ಪ ಸಂಶೋಧಕರಾದ ಡಾ.ಎಂ.ಚಿದಾನಂದ ಮೂರ್ತಿ ಮತ್ತು ಎಸ್.ಶಿವಣ್ಣನವರ ಪರಿಶ್ರಮದಿಂದ ಸುಮಾರು ೨೦೦೦ ಹಸ್ತಪ್ರತಿಗಳನ್ನು ಸಂಗ್ರಹಿಸಿರುವ ಈ ವಿಭಾಗವು ಪ್ರಕಟವನ್ನು ಕೈಗೆತ್ತಿಗೊಳಲಲ್ಲ.

ಅಲ್ಲದೆ ಗುಲ್ಬಾರ್ಗಾ ವಿಶ್ವವಿದ್ಯಾಲಯದ ಕನ್ನಡ ವಿಭಾಗ ೨೫೦ ಹಸ್ತಪ್ರತಿಗಳನ್ನು ಮಾತ್ರ ಹೊಂದಿದೆ, ಮಂಗಳೂರು ವಿಶ್ವವಿದ್ಯಾಲಯದಲ್ಲಿ ೫೦೦ಕ್ಕೂ ಹೆಚ್ಚು ಪ್ರತಿಗಳನ್ನು ಸಂಗ್ರಹಿಸಿದೆ. ಕರ್ನಾಟಕ ಸಂಸ್ಕೃತಿಯ ಶೋಧನೆ ಮತ್ತು ಪ್ರಸಾರಕ್ಕಾಗಿ ಆರಂಭವಾದ ವಿಶಿಷ್ಟ ವಿಶ್ವವಿದ್ಯಾಲಯ ಈ ಕನ್ನಡ ವಿಶ್ವವಿದ್ಯಾಲಯ ಕನ್ನಡವನ್ನು ಎಲ್ಲ ಮೂಲಗಳಿಂದಲೂ ಗ್ರಹಿಸುವ ಸಮಗ್ರ ದೃಷ್ಟಿಕೋನದ ಮತ್ತು ಎಲ್ಲ ಸಾಧ್ಯತೆಗಳನ್ನು ಬೆಳೆಸುವ ಸವಾಲಿನೊಂದಿಗೆ ಆರಂಭವಾದ ಈ ವಿಶ್ವವಿದ್ಯಾಲಯದಲ್ಲಿ ೧೯೯೬ರಲ್ಲಿ 'ಹಸ್ತಪ್ರತಿವಿಭಾಗ' ರಚನೆಯಾಯಿತು. ಅಪಾರ ಸರ್ವೇಕ್ಷಣೆಯನ್ನು ಗೈದು ಉತ್ತಮ ಹಸ್ತಪ್ರತಿ ಸಂಗ್ರಹವನ್ನು ಹೊಂದಿದೆ. ಎರಡು ಹಸ್ತಪ್ರತಿ ಸಂಪುಟ ಸೂಚಿಕರಣಗೊಂಡಿವೆ.

**೨. ಸಾರ್ವಜನಿಕ ಹಸ್ತಪ್ರತಿ ಭಂಡಾರಗಳು :**

ಪ್ರಾಚೀನ ಜ್ಞಾನ ಪರಂಪರೆಯಲ್ಲಿ ಈಗಿರುವಂತೆ ಸಾರ್ವಜನಿಕ ಗ್ರಂಥಭಂಡಾರಗಳು ಇದ್ದದ್ದು ಕಂಡುಬರುವುದಿಲ್ಲ ಬದಲಾಗಿ ಅಧ್ಯಯನ, ಧರ್ಮಪ್ರಸಾರ, ಶಾಸ್ತ್ರದಾನಗಳಿಂದಾಗಿ ಸತ್ಪಾತ್ರರು ಸಂಗ್ರಹಿಸಿದ ಮಠ, ಮಂದಿರ, ಬಸದಿ ಮಹಾಮನೆಯಲ್ಲಿ ಸಂಗ್ರಹಿತ ಹಸ್ತಪ್ರತಿ ಭಂಡಾರಗಳು ಸಾರ್ವಜನಿಕ ಗ್ರಂಥಾಲಯಗಳಂತೆ, ಕಾರ್ಯನಿರ್ವಹಿಸುತ್ತಿದ್ದವು. ಸಾರ್ವಜನಿಕ ಎನ್ನುವುದೇ ಬಹುಮುಖ್ಯವಾಗಿ ಖಾಸಗಿ ಅಧೀನತೆಯಿಂದ ಮುಕ್ತವಾಗುವುದು[೨].

೧೮೫೮ರಲ್ಲಿ ಸ್ಥಾಪಿತವಾದ ಮದರಾಸು ಸರಕಾರಿ ಹಸ್ತಪ್ರತಿ ಭಂಡಾರಕ್ಕೆ ಸೇರಿದ ಕರ್ನಲ್‌ಮೆಕೆಂಜಿ ಸಂಗ್ರಹವೇ ಪ್ರಪ್ರಥಮ ಸಾರ್ವಜನಿಕ ಹಸ್ತಪ್ರತಿ ಭಂಡಾರ ಎನ್ನುವ ಹೆಚ್, ದೇವಿರಪ್ಪನವರ ರವರು ಬಹಳ ಪ್ರಸ್ತುತವಾದದ್ದು. ಪ್ರತಿಯೊಂದನ್ನು ಪಾಶ್ಚಾತ್ಯ ಪ್ರೇರಣೆಯಿಂದಲೇ ಮಾಡುವ ನಮ್ಮ ಅನುಕರಣ ಶೀಲ ಸ್ವಭಾವಕ್ಕೆ ಖಾಸಗೀತನದಿಂದ ಬಿಡಿಸಿ ಆಸ್ತಿಗಳೆಂದು ಅಮೂಲ್ಯ ನಿಧಿಗಳೆಂದೂ ಮೂಢ ಬುದ್ಧಿಯಿಂದ ನಾಡಿನ ಸಾಂಸ್ಕೃತಿಕ ಸಂಪತ್ತನ್ನು ಹಾಳುಮಾಡುತ್ತಿದ್ದ ಜನರ ಕೈಯಿಂದ ಬಿಡಿಸಿದ ಕೀರ್ತಿ ನಮ್ಮ ಹಿರಿಯರಿಗೆ ಸಲ್ಲಬೇಕು.

ವೈಯಕ್ತಿಕ ದುರಾಸೆಗಳಿಂದ ದೂರ ಸರಿದು ಸಮಸ್ಯೆ ಪ್ರಜ್ಞೆಯಿಂದ ದುಡಿದು ಅಪಾರ ಸಾಂಸ್ಕೃತಿಕ ಬಹುಳತೆಯನ್ನು ತೆರೆದಿಟ್ಟವರು ಇವರು ಇವರಲ್ಲಿ ಬಹುಮುಖ್ಯರಾದವರು ಫ.ಗು.ಹಳಕಟ್ಟಿ; ಗೊನಾಬಾಳು ಹನುಮಂತರಾಯರು, ವೆಂಕಟಾಚಾರ್ಯ, ಸಿರಿಯಾ ಕೊಪ್ಪದ ಮಲ್ಲಿಕಾರ್ಜುನ, ಉತ್ತಂಗಿ ಚನ್ನಬಸಪ್ಪ, ಮೈಸೂರು ವಿಭಾಗದಲ್ಲಿ. ಎ.ರಾಮಾನುಜ ಅಯ್ಯಾಂಗಾರ್, ಎಸ್.ಜಿ.ನರಸಿಂಹಚಾರ್ಯ, ಆರ್.ನರಸಿಂಹವಾರ್ಯ, ಪಿ.ಆರ್.ಕರಿಬಸವಶಾಸ್ತ್ರೀಗಳು ಉಮಾಪತಿ ಶಾಸ್ತ್ರೀಗಳು ಮುಂತಾದವರು, ಇದಲ್ಲದೆ ಮೂಡಬಿದರೆಯ ನೇಮಿರಾಜಶೆಟ್ಟಿ ದೇವಿರಾಜಶೇಟ್ಟಿ, ಪದ್ಮನಾಭಶಾಸ್ತ್ರೀ, ಶಾಂತಿರಾಜ ಇಂದ್ರ ಹೊಸಬಸದಿ ಬೈಕೋರಿಕಾರಿ ಬಸದಿ, ಅನರಾಜು ಇಂದ್ರ, ಪಡಂಬಸದಿ, ಚೌಕಟಧರ್ಮ ಅವರುಗಳು ಕೂಡಾ ವಿಭಿನ್ನ ವಿಷಯಗಳುಳ್ಳ ಗಣನೀಯ ಪ್ರಮಾಣದ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದು ತಿಳಿದುಬರುತ್ತದೆ.೭

೩. ಮಠ-ಮಾನ್ಯಗಳ ಹಸ್ತಪ್ರತಿ ಭಂಡಾರಗಳು

ಸಾಂಸ್ಕೃತಿಕ ಭಾಗವಾಗಿರುವ ಹಸ್ತಪ್ರತಿ ಸಂರಕ್ಷಣೆಯಲ್ಲಿ ನಾಡಿನ ಮಠ-ಮಾನ್ಯಗಳ ಪಾತ್ರ ಗುರುತರವಾದದ್ದು, ಆಹಾರ, ಅಭಯ ಬೈಷಜ್ಯವೃತವನ್ನು ನಿರಂತರವಾಗಿ ನಡೆಸಿಕೊಂಡುಬಂದ ಇವು ಶಾಸ್ತ್ರದಾನವನ್ನು ಮಾಡುತ್ತಿಲೇ ಗ್ರಂಥಗಳ ಉತ್ಪಾದನೆ ಸಂರಕ್ಷಣೆ ಹಾಗೂ ಪರಿಚಲನೆಯಲ್ಲಿ ಮಹತ್ವದ ಹೆಜೇಯನ್ನಿಟ್ಟಿವೆ ಇವುಗಳಲ್ಲಿ

೧. ಚಾರುಕೀರ್ತಿ ಭಟ್ಟಾರಕ ಮಠ ಶ್ರವಣಬೆಳ್ಗೊಳ : ಆಗಮಾದರ್ಶನ ಹೆಸರಿನ ಹಸ್ತಪ್ರತಿಭಂಡಾರದಲ್ಲಿ ಸುಮಾರು ೧ಸಾವಿರ ಹಸ್ತಪ್ರತಿಗಳಿವೆ. ೧೯೮೦ರಲ್ಲಿ ಪಂ.ಶ್ರೀ ದೇವೇಂದ್ರಕುಮಾರ ಶಾಸ್ತ್ರೀಗಳು "ಶ್ರವಣ ಬೆಳಗೊಳದ ಶ್ರೀಜೈನ ಮಠದ ತಾಡಪ್ರತೀಯ ಗ್ರಂಥಗಳವಿವರ" ಎಂಬ ಹೆಸರಿನಲ್ಲಿ ಪ್ರತಿಗಳ ಪಟ್ಟಿಯನ್ನು ಸಿದ್ಧಪಡಿಸಿ ಗ್ರಂಥಪ್ರಕಟಿಸಿದರು.

೨. ಹೋಂಬುಜ, ಮೂಡಬಿದಿರೆ, ಕಾರ್ಕಳ ಮಠಗಳು, ಅಲಿಯೂರಿನ ಆಧಿನಾಥಗ್ರಂಥ ಭಂಢಾರ, ಧರ್ಮಸ್ಥಳ ಹಸ್ತಪ್ರತಿ ಭಂಡಾರ, ಗುದುಗಿನ ತೋಂಟದಾರ್ಯಮಠ, ವಿಜಯ ಮಹಾಂತೇಶಿ ಗ್ರಂಥಾಲಯ ಚಿತ್ರದುರ್ಗ ಮುರುಘರಾಜೇಂದ್ರ ಬೃಹನ್ಮಠ, ಹುಬ್ಬಳಿಯ ಮೂರುಸಾವಿರಮಠ, ಹೊಸಪೇಟೆಯ ಕೊಟ್ಟುರು ಸ್ವಾಮಿಯಮಠ ಬೆಳಗಾವಿಯ ರುದ್ರಾಕ್ಷಿಮಠಗಳು ಹಸ್ತಪ್ರತಿಸಂಗ್ರಹಣೆಯ ಸಂಗ್ರಾಹಲಯವೆನಿಸಿವೆ. ಒಟ್ಟಾರೆ ಹತ್ತುಸಾವಿರಕ್ಕೂ ಹೆಚ್ಚು ಹಸ್ತಪ್ರತಿಗಳು ಇಲ್ಲಿ ನೆಲೆ ಕಂಡುಕೊಂಡಿವೆ. ಈ ನಿಟ್ಟಿನಲ್ಲಿ ಸರ್ಕಾರಿ, ಸರ್ಕಾರೇತ್ತರ, ವೈಯಕ್ತಿಕವಾಗಿ, ಮಠಮಾನ್ಯಗಳ ಅಧೀನದಲ್ಲಿ ಇಂತಹ ಸಂಗ್ರಹಕಾರ್ಯ ನಡೆದದ್ದು ಅಭೂತಪೂರ್ವವೆನಿಸಿದ್ದಲ್ಲದೆ ಅರ್ಥಪೂರ್ಣ ಕೂಡಾ ಆಗಿದೆ.

೨.೨.೩.ಶಾಸನಗಳು (ಪಾರಂಪರಿಕ ಸಂಗ್ರಹಣೆಯ ಆಕರಗಳಾಗಿ)

ಶಾಸನವೆಂದರೆ ರಾಜ್ಞಾಜ್ಞೇ ಅದನ್ನು ಎಲ್ಲಾ ಪ್ರಜೆಗಳೂ ಪಾಲಸಿಬೇಕಾಗುತ್ತಿತ್ತು. ಇಲ್ಲದಿದ್ದರೆ

ರಾಜನ ದಂಡನೆಗೆ ಗುರಿಯಾಗಬೇಕಾಗುತ್ತಿತ್ತು. ರಾಜನು ತಾನು ಕೊಟ್ಟ ದಾನದ ವಿಷಯವಾಗಿಯೇ ಮಾಡಿದ ಧರ್ಮಕಾರ್ಯದ ಬಗ್ಗೆಯೇ ಆಜ್ಞೆಯನ್ನು ಹೊರಡಿಸುತ್ತಿದ್ದನು ಶಾಸನ ಎಂಬ ಶಬ್ದಕ್ಕೆ ಧರ್ಮಲಿಪಿ ಮುಂತಾದ ಅರ್ಥಗಳು ಹುಟ್ಟಿವೆ. ಅಶೋಕ ತನ್ನ ಶಾಸನಗಳನ್ನು ಧರ್ಮಲಿಪಿಗಳೆಂದು ಹೇಳಿಕೊಂಡಿದ್ದಾನೆ. ಶಾಸನ ಎಂಬ ಶಬ್ದವನ್ನು ನಾವು ಕಲ್ಲು ಮುಂತಾದ ವಸ್ತುಗಳ ಮೇಲೆ ಕೊರೆದದ್ದು ಎಂಬ ಅರ್ಥದಲ್ಲಿ ಬಳಸುತ್ತಿದ್ದೇವೆ. ಸುಮಾರು ೨೫೦೦೦ ಶಾಸನಗಳಿವೆಯೆಂದು ಪರಿಗಣಿಸಲಾಗಿದೆ.

**೧. ಶಾಸನದ ಪ್ರಕಾರಗಳು**

ವಿವಿಧೋದ್ದೇಶಗಳನ್ನು ತಿಳಿಸುವುದಕ್ಕಾಗಿ ಶಾಸನಗಳನ್ನು ಬರೆದಿದ್ದಾರೆ. ಯಜ್ಞ-ಯುಗಾದಿಗಳಿಗೆ ಸಂಬಂಧಿಸಿದ ಶಾಸನಗಳು ಯಾವ ಶಾಸನಗಳು, ಬಂಡೆಗಳು ಕಂಬಗಳ ಮೇಲಿರುವ ಶಾಸನಗಳು ಸ್ತಂಭಶಾಸನಗಳು, ರಾಜರು ಹೊರಡಿಸಿದ ಶಾಸನಗಳು ರಾಜಶಾಸನಗಳು, ದಾನವನ್ನು ಉಲ್ಲೇಖಿಸುವ ಶಾಸನಗಳು, ವಿಜಯವನ್ನು ಹೇಳುವ ವಿಜಯಶಾಸನಗಳು, ಅಭಯನೀಡಿದ ಶಾಸನಗಳು ಬೆಲೆಕೊಟ್ಟು ಕೊಂಡದ್ದನ್ನು ಹೆಸರಿಸುವ ಶಾಸನಗಳು ಕ್ರಯ ಶಾಸನಗಳು, ಇವಲ್ಲದೆ ವೀರರ ಸ್ಮಾರಕಕ್ಕಾಗಿ ನೆಟ್ಟ ಶಾಸನಗಳು ವೀರಗಲ್ಲು ಶಾಸನಗಳು, ಸತಿಹೋದವರ ನಿಲ್ಲಿಸಿದ ಶಾಸನಗಳು. ಮಹಾಸತಿಶಾಸನಗಳು ಸೂರ್ಯಗ್ರಹಣ ಕಾಲದಲ್ಲಿ ಮೃತ್ಯುವನ್ನಪ್ಪಿದವರು ಶಾಸನಗಳು ಜೈನರ ಅವಶವ ವೃತಮಾಡಿ ಸತ್ತವರ ಸಲುವಾಗಿ ತಯಾರಿಸಿದ ನಿಸದಿಶಾಸನಗಳು ಪ್ರಶಸ್ತಿಶಾಸನಗಳು ಯಂತ್ರಕಲ್ಲು ಶಾಸನಗಳು ಮುಂತಾದ ಅನೇಕ ಶಾಸನಗಳು ಪ್ರಕಾರಗಳಿವೆ.

ಇವು ನಮ್ಮ ಸಂಸ್ಕೃತಿ ಮೌಲ್ಯವನ್ನು ಬಿಂಬಿಸುವ ಬಿಂಕವರ್ಣಗಳಾಗಿವೆ. ನಮ್ಮ ಚರಿತ್ರೆಯ ಬೆನ್ನಲಬುಗಳಾಗಿವೆ. ಆದ್ದರಿಂದ ಇವುಗಳ ಸಂಗ್ರಹಣೆ, ಸಂಪಾದನೆ ಪ್ರಕಟನೆ ಕೆಲಸ ಪರಿಪೂರ್ಣವಾಗಬೇಕಾಗಿದೆ. ಶಾಸನಗಳನ್ನು ಜೈವತ್ಸ್ ಪ್ರಿನ್ಸ್‌ಫ್, ಎಂಬುವರು ಪಾಕೃತ ಲಿಪಿಯನ್ನು ಸಮರ್ಥವಾಗಿ ಅಧ್ಯಯನ ಮಾಡಿದರಲ್ಲದೆ ಬೆಳಕಿಗೆ ತಂದು ೧೯೨೦-೨೧ರ ಘಟ್ಟದಲ್ಲಿ ಅಂದರೆ 'ಸಿಂಧೂ ನಾಗರಿತೆಯ' ಶೋಧದ ನಂತರ ಈ ಶಾಸ್ತ್ರ ಒಂದು ಪ್ರತ್ಯೇಕ ಇಲಾಖೆಯಾಗಿ ಹೊರಹೊಮ್ಮಿತು ೧೭೫೭ರಲ್ಲಿ. ವಿಲಿಯಂ ಜೇನ್ಸನು ಏಷ್ಯಾಟಿಕ್ ಸೋಸಾಯಿಟಿಯನ್ನು ಸ್ಥಾಪಿಸಿದನು ಅದರ ಮೂಲಕ ಶಾಸನಗಳನ್ನು ಪ್ರಕಟಿಸಿದನು ನಂತರ ಬಂದ ಸರ್‌ಜಾನ್ ಮಾರ್ಷಲರವರು ೧೯೦೫ರಲ್ಲಿ ಸುಮಾರಿಗೆ ಪುರಾತತ್ವ ಇಲಾಖೆಯನ್ನು ಸ್ಥಾಪಿಸಿ ಅದರಡಿಯಲ್ಲಿ ಶಾಸನ ಸ್ಮಾರಕ ಶೋಧನ ಕಾರ್ಯವನ್ನು ನಡೆಸಿದನು.

ಇವನ ತರುವಾಯ ಫಾದಕ್ ಹೊಸ್, ಬ್ರೂಸ್‌ಪುಟ್, ಜೆ.ಎಂ.ಫ್ಲೀಟ್, ಬಿ.ಎಲ್.ರೈಸ್, ಆರ್.ಎಲ್.ರೈಸ್.ಆರ್.ನರಸಿಂಹಚಾರ್ಯ ಪಿ.ಮಹಾದೇವನ್, ಆರ್. ಸುಂದರ ರಂತ ಅಥಿರತ ಮಹಾರತರಂತಹ ಘಟಾನುಘಟಿಗಳ ಮಧ್ಯ ಈ ಕ್ಷೇತ್ರ ತನ್ನ ಹರವನ್ನು ವಿಸ್ತರಿಸಿಕೊಂಡಿತು ಇವುಗಳ ಸಂಗ್ರಹಕಾರ್ಯ

1. **S.I.I**. - South indian Iniscription

2. **I.A**. - Indian Antiquary

3. Ephigrapica Cornatica

4. M.R.T. Series

ಈ ಮಧ್ಯ ಕನ್ನಡ ವಿಶ್ವವಿದ್ಯಾಲಯ ಡಾ.ದೇವರಕೊಂಡಾರೆಡ್ಡಿ, ಡಾ.ಡಿ.ವಿ.ಪರಶಿವಮೂರ್ತಿ, ಡಾ.ಕೆ.ಜಿ.ಭಟ್‌ಸೂರಿ ಅವರ ನೇತೃತ್ವದಲ್ಲಿ ಇವುಗಳ ಸಂಗ್ರಹಕಾರ್ಯ ಉತ್ತಮಗೊಂಡಿದೆ.

೫. ಬಾಗಲಕೋಟೆ ಜಿಲ್ಲೆಯ ಶಾಸನಗಳು

೬. ಬಳ್ಳಾರಿ ಜಿಲ್ಲೆಯ ಶಾಸನಗಳು

೫. ಫ್ರೌಡ ದೇವರಾಯ ಶಾಸನಗಳು

೮. ತಮಿಳು ನಾಡಿನ ಶಾಸನಗಳು

೯. ಆಂದ್ರ ಪ್ರದೇಶದ ಕನ್ನಡ ಶಾಸನಗಳು

ಈ ಹಲವಾರು ಸಂಪುಟಗಳಲ್ಲಿ ಇವುಗಳು ಸಂಗ್ರಹಗೊಂಡು ಸಂಸ್ಕೃತಿಯ ಮೇರು ದರ್ಪಣಗಳಂತಿವೆ.

**೨. ತಾಮ್ರಪಟಗಳು**

ಇವುಗಳ ಕೂಡಾ ಚರಿತ್ರಯೆ ಪೂರಕ ಸಾಮಗ್ರಿಯಾಗಿದ್ದು ಅಂದಂದಿನ ರಾಜರ ರಾಜಕೀಯ ಮಾಹಿತಿಯನ್ನು ತೋರ್ಪಡಿಸುತ್ತವೆ. ಗಂಗರ ತಾಮ್ರಪಟಗಳು, ಹಲನೆಯ ತಾಮ್ರ ಪಟಗಳು ಹೊಂಬುಜ ತಾಮ್ರ ಪಟಗಳು ಮುಂತಾದ ದೊರೆಗಳ ಪಂಡಿತ ಪಾಮರದ ತಾಮ್ರ ಪಟಗಳು ಮ್ಯೂಸಿಯಂಗಳಲ್ಲಿ ಸಂಗ್ರಹಿತವಾಗಿವೆ.

**೩. ನಾಣ್ಯಗಳು ಮತ್ತು ಕಡತಗಳು**

ನಾಣ್ಯಗಳು ಲೀಡಾ ಒಂದು ಸಾಮ್ರಾಜ್ಯದ ಆರ್ಥಿಕಮಾನದಂಡವಾಗಿ ಪರಿಣಮಿಸಿವೆ. ಎಷ್ಟೂ ಸಾರಿ ನಾಣ್ಯಗಳಿಂದ ರಾಜರ ಚರಿತ್ರೆಯನ್ನು ಪುನಾರಚಿಸುವಂತೆ ಮಾಡಿದೆ. ನಾಣ್ಯಗಳನ್ನು ಪಂಚಲೋಹ ಇಲ್ಲವೆ, **Cu.Fe.Au.Ph** ಗಳ ಮೂಲ ಧಾತುಗಳಿಂದ ಮಾಡುತ್ತಾರೆ ಅವುಗಳಲ್ಲಿ ಗದ್ಯಾಣ ನಾಣ್ಯವು ಪ್ರಮುಖವಾದದ್ದು ನಂತರ ದೊರೆತ ವಿಜಯನಗರ ಅರಸರ ಬಂಗಾರದ ನಾಣ್ಯಗಳು ಅವರ ಸುವರ್ಣಯುಗಕ್ಕೆ ಸಾಕ್ಷಿಯಾಗಿವೆ, ಅವುಗಳನ್ನು ಸುರಕ್ಷಿತ ಸಂಗ್ರಾಲಯಗಳಲ್ಲಿ ಇರಿಸಿದ್ದಾರೆ.

೧. ಕಮಲಾಪುರ ವಸ್ತು ಸಂಗ್ರಾಲಯ (ಪ್ರಾಚ್ಯ ವಸ್ತು)

೨. ಲಕ್ಕುಂಡಿ ವಸ್ತು ಸಂಗ್ರಾಲಯ

೩. ಗದಗ ವಸ್ತು ಸಂಗ್ರಾಲಯ

೪. ಬೆಂಗಳೂರು ವಸ್ತು ಸಂಗ್ರಾಲಯ

೫. ಮೈಸೂರು ವಸ್ತು ಸಂಗ್ರಾಲಯ

೬. ಬಾಗಲಕೋಟೆ ವಸ್ತು ಸಂಗ್ರಾಲಯ

೭. ಕನ್ನಡ ವಿಶ್ವವಿದ್ಯಾಲಯ, ಹಂಪಿ ವಸ್ತು ಸಂಗ್ರಾಲಯ

ಮುಂತಾದ ಪ್ರದೇಶಗಳಲ್ಲಿ ನಮ್ಮ ಪರಂಪರೆಯಲ್ಲಿ ಬಳಸಿಕೊಂಡು ಬಂದ ಎಷ್ಟೋ ವಸ್ತುಗಳು ಇಂದು ಕಣ್ಮರೆಯಾಗಿವೆ. ಹಾಗೆ ಕಣ್ಮರೆಯಾಗುತ್ತಿರುವ ನಮ್ಮ ಪರಂಪರೆ ಪ್ರತೀಕವೆಂಬತೆ ಸರ್ಕಾರ ಸಂಘ ಸಂಸ್ಥೆಗಳು ಅಂತಹುಗಳನ್ನು ಸಂಗ್ರಹಿಸಿ ಸಂರಕ್ಷಿಸಿ ಮುಂದಿನ ಪೀಳಿಗೆಗೆ ಅವುಗಳ ಕುರಿತು ಮನವರಿಕೆ ಮಾಡಿಕೊಡುವುದಾಗಿದೆ.

### ೪. ಸ್ಮಾರಕಗಳು

ವೀರರ ಸ್ಮರಣೆಗಾಗಿ ನೆನಪಿಗಾಗಿ ಕಟ್ಟಿಸಿದಂತಹವು ನಮ್ಮ ಪುರಾತನ ಪರಿಚಯವನ್ನು ಮಾಡಿಕೊಡುತ್ತವೆ. ಅವರ ಕಲಾಸಂಸ್ಕೃತಿಯನ್ನು ಬಿಂಬಿಸಲು ಸಹಾಯಕವಾಗಿವೆ. ಇವುಗಳನ್ನು ಸಂಗ್ರಹಿಸಲು ಬರುವುದಿಲ್ಲ ಆದರೆ ಸಂರಕ್ಷಣೆ ಮಾಡಲು ಬರುತ್ತಿದೆ. ಆದ್ದರಿಂದ ಕೇಂದ್ರ ಪುರಾತತ್ವ ಅಂತರಾಷ್ಟ್ರೀಯ ಯುನೆಸ್ಕೋ ಹೆಂಟೇಜ್ ತಂಡಗಳು ಬೇಡಿಕೆಯಿತ್ತ ಇಂತಹ ಅಮೂಲ್ಯ ವಸ್ತುಸಂಗ್ರಹವೆನಿಸಿವೆ, ಹಂಪಿಯ ಸ್ಮಾರಕಗಳು, ಬೇಲೂರು, ಹಳೇಬೀಡು, ಹೊಂಬುಜ, ಬೆಳಗಾವಿ, ಗದಗ, ಲಕ್ಕುಂಡಿ, ಶ್ರವಣ ಬೆಳ್ಗೊಳ ಮುಂತಾದವುಗಳು

ಹೀಗೆ ಸಾಂಸ್ಕೃತಿಕ ಪರಂಪರೆಯ ಅವಿಭಾಜ್ಯ ಅಂಗಗಳಾಗಿ ಶಾಸನಗಳು, ಹಸ್ತಪ್ರತಿಗಳು, ನಾಣ್ಯಗಳು, ಸ್ಮಾರಕಗಳು, ನಮ್ಮೆದುರು ನಿಲ್ಲುತ್ತವೆ ಈ ಪರಿಕರಗಳು ಸಂಗ್ರಹಣೆಯಿಂದ, ಪ್ರಾಚೀನ–ಆಚಾರ–ವಿಚಾರ–ವೈಚಾರಿಕ, ನೆಲೆಗಟ್ಟಿನ ಗುಟ್ಟು ರಟ್ಟಾಗುತ್ತದೆ, ಒಂದು ಸಂಸ್ಕೃತಿಯನ್ನು ಮೌಲ್ಯಮಾಪನ ಮಾಡುವ ಸಾಮಾರ್ಥ್ಯ ಸ್ಮಾರಕಶಾಸನಗಳಾಗಿವೆ. ಹಸ್ತಪ್ರತಿಗಳು ನಿರ್ಣಾಯಕ ಸ್ಥಾನವನ್ನು ವಹಿಸುತ್ತವೆ. ಒಟ್ಟಾರೆ ಒಂದು ನಾಡಿನ ಸಂಪೂರ್ಣಚರಿತ್ರೆಯನ್ನು ತಮ್ಮೂಲಕ ಬಿಂಬಿಸುವ ಕಾರ್ಯ ಮಾಡುತ್ತವೆ. ಒಟ್ಟಿನಲ್ಲಿ ಪಾರಂಪರಿಕ ಜೀವನಾವಶ್ಯಕ ವಸ್ತುಗಳು ಹಾಗೂ ಜ್ಞಾನ ಸಾಮಗ್ರಿಗಳ ಸಂಗ್ರಹ ಎನ್ನುವುದೇ ಒಂದು ಜೈವಿಕ ಕ್ರಿಯೆಯಾಗಿತ್ತು. ತಿಳುವಳಿಕೆಯನ್ನು ಬರೀ ಲಿಪಿ ಪಾತಳಿಯಲ್ಲಿ ವಿಸ್ತರಿಸಿಕೊಳ್ಳದೆ ಜೀವನಾನುಭವದ ಬೆಳಕಿನಲ್ಲಿ ರೂಪಿಸಿಕೊಂಡರು. ಬರೀ ವಸ್ತುರೂಪದ ರಕ್ಷಣೆಯನ್ನು ಹೇಳದೆ ಪರಿವರ್ತನರೂಪಿ ಹಾಗೂ ಕ್ರಿಯಾಶೀಲರೂಪಿ ಸಂಗತಿಗಳನ್ನು ತಿಳಿಸುತ್ತವೆ. ವಿಶೇಷವಾಗಿ ಕೃಷಿ, ಪ್ರಕೃತಿ ಹಾಗೂ ವಿದ್ಯೆಯ ನೆಲೆಗಳನ್ನು ಸ್ತ್ರೀ ರೂಪದಲ್ಲಿಯೇ ಪರಿಭಾವಿಸಿಕೊಂಡಿರುವ ಭಾರತೀಯ ಮನಸ್ಸುಗಳಲ್ಲಿ ಬಳಕೆಯ ಪ್ರತಿಯೊಂದು ವಸ್ತುವು ಪಾವಿತ್ರ್ಯ ಹಾಗೂ ಶ್ರದ್ಧಾಸ್ಥಾನವನ್ನು ಪಡೆದುಕೊಳ್ಳುತ್ತದೆ. ಹಾಗಂತ ಬರೀ ದೈಪೀನೆಲೆಯಲ್ಲಿಯೇ ಇದರ ಅಂತಿಮ ಸತ್ಯವೆಂದಲ್ಲ ಸಂಗ್ರಹದ ಹಾಗೂ ಸಂರಕ್ಷಣೆಯ ಮುಖ್ಯ ನೆಲೆಯೇ ಮಾತೃಸ್ವರೂಪಿಯಾದದ್ದು. ಸಂಗ್ರಹಣೆಯ ಮುಖ್ಯ ಕೇಂದ್ರವೇ ತಾಯ್ತನ. ಈ ಪರಿಕಲ್ಪನೆಯಲ್ಲಿ ಇಡಿ ಅಧ್ಯಯನವನ್ನು ಗ್ರಹಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

**ಅಡಿ ಟಿಪ್ಪಣಿಗಳು**

೧. ವ್ಹಿ.ಎಸ್. ಬಡಿಗೇರ; ಪಾರಂಪರಿಕ ಸಂರಕ್ಷಣಾ ಕ್ರಮಗಳಲ್ಲಿ ಸಮಸ್ಕೃತಿ ಸಂವರ್ಧನಾ ಪ್ರಮೆಯಗಳು; ಲೇಖನ ಪುಟ,

೨. ಪೂರ್ವೋಕ್ತ ಪುಟ, ೧

೩. ಸಣ್ಣಯ್ಯ ಬಿ.ಎಸ್.; ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಪೀಠಿಕಾ ಭಾಗ ಪುಟ,

೪. ಪೂರ್ವೋಕ್ತ ಪುಟ, ೬–೭

೫. ಗೀತಾಚಾರ್ಯ ನಾ.; ಸರ್ಕಾರಿ ಹಸ್ತಪ್ರತಿ ಭಂಡಾರಗಳು, ಹಸ್ತಪ್ರತಿ ವ್ಯಾಸಂಗ; ಸಂಪುಟ–೨, ಪು೧, ೬೧

೬. ವ್ಹಿ.ಎಸ್. ಬಡಿಗೇರ; ಸಾರ್ವಜನಿಕ ಹಸ್ತಪ್ರತಿ ಭಂಡಾರಗಳು; ಹಸ್ತಪ್ರತಿ ವ್ಯಾಸಂಗ; ಸಂಪುಟ–೨, ಪು೧, ೭೬

೭. ಶೇಷಶಾಸ್ತ್ರ ಆರ್.; ಶಾಸನ ಪರಿಚಯ, ಪುಟ–೮



ಸಂಸ್ಕೃತಿಯು ಒಂದು ತಲೆಮಾರಿನ ಸಂಪತ್ತು ಅದು ಮುಂದಿನ ಪೀಳಿಗೆಗೂ ವಿಸ್ತೃತವಾಗಬೇಕಾದರೆ. ಸಂಗ್ರಹಣದೊಂದಿಗೆ ಸಂರಕ್ಷಣೆಯು ತುಂಬಾ ಅವಶ್ಯಕವಾದುದು. ಈ ನಿಟ್ಟಿನಲ್ಲಿ ನಮ್ಮ ಪರಂಪರೆಯನ್ನು ಸಂರಕ್ಷಿಸಿ ಅದನ್ನು ವಿದ್ಯುನ್ಮಾನ ಉಪಕರಣಗಳ ಮೂಲಕ ಸೆರೆಹಿಡಿಯಬೇಕು. ಅದನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಬೇಕು. ಈ ನಿಟ್ಟಿನಲ್ಲಿ ಕೃಷಿ ಪರಿಕರಗಳ ಸಂಗೋಪನದೊಂದಿಗೆ ಸಂವರ್ಧನೆಯೂ ಕೂಡಾ ಅವಶ್ಯವಾಗಿದೆ. ನಮ್ಮ ಪಾರಂಪರಿಕ ಬದುಕನ್ನು ಅನಾವರಣಗೊಳಿಸುವ ಚಾರಿತ್ರಿಕ ಮೂಲ ಸಾಮಗ್ರಿಗಳಾದ ಇವುಗಳನ್ನು ಸಂರಕ್ಷಿಸುವುದು ಅರ್ಥಪೂರ್ಣ.

ಭಾರತ ಅಥವಾ ಭಾರತದ ಪ್ರಾದೇಶಿಕ ಸಂಸ್ಕೃತಿಗಳಲ್ಲಿ ಬಳಕೆಯ ಹಾಗೂ ಉಳಿಕೆಯ ಪರಿಕರಗಳನ್ನು ಸಂರಕ್ಷಿಸಿಕೊಳ್ಳಲು ಹಲವಾರು ವಿಧದ ಸಂಗೋಪನ ಕ್ರಮಗಳು ಜಾರಿಯಲ್ಲಿವೆ. ಈ ಕ್ರಮಗಳು ಒಂದು ವಿಧದಲ್ಲಿ ಪ್ರಪಂಚದ ಎಲ್ಲಾ ಕಡೆಗೂ ಸ್ವಲ್ಪ ಭಿನ್ನತೆಯೊಂದಿಗೆ ಒಂದು ಸಮಾನತೆಯನ್ನು ಕಾಯ್ದುಕೊಂಡಿದ್ದು ಕಂಡುಬರುತ್ತದೆ. ಆಧುನಿಕ ದೃಷ್ಟಿಯಲ್ಲಿ ಇವು ಸಂರಕ್ಷಣ ತಂತ್ರಗಳಲ್ಲ ಸ್ವಾನುಭವ ಹಾಗೂ ಜೀವನಾನುಭವದೊಂದಿಗೆ ಸ್ಥಳೀಯ ಪಾರಂಪರಿಕ ಸಂರಕ್ಷಣಾ ಕ್ರಮಗಳು ಕ್ರೀಯಾತ್ಮಕ ಸಾತತ್ಯವನ್ನು ಹೊಂದಿವೆ. ಹೀಗಾಗಿ ಇವುಗಳಿಗೆ ಸಾರ್ವತ್ರಿಕತೆಗಿಂತ ಸಾಂದರ್ಭಿಕತೆ ಪ್ರಧಾನವಾಗುತ್ತದೆ. ಸಂವರ್ಧನೆ ಪ್ರಧಾನವಾಗುತ್ತದೆ[೧]. ಅಂಥಹ ಕೆಲವೊಂದು ವಿಶಿಷ್ಟ ಸಂಗತಿಗಳನ್ನು ಇಲ್ಲಿ ಗಮನಿಸಬಹುದು.

**೩.೧. ದಿನ ಬಳಕೆ ಸಾಮಗ್ರಿಗಳ ಸಂರಕ್ಷಣೆ**

ಜಗತ್ತಿನ ಎಲ್ಲಾ ಪ್ರಾಣಿವರ್ಗಗಳಲ್ಲಿ ಮನುಷ್ಯನು ತನ್ನ ಬುದ್ಧಿವಂತಿಕೆಯಿಂದ ವಿಶಿಷ್ಟವಾಗಿದ್ದಾನೆ. ತನ್ನದೇ ಆದ ಒಂದು ಸುಸಂಸ್ಕೃತ ಪರಿಸರವನ್ನು ನಿರ್ಮಿಸಿಕೊಂಡಿದ್ದಾನೆ. ಸಾಮಾಜಿಕ ವ್ಯವಸ್ಥೆಯಲ್ಲಿ

ತನ್ನನ್ನು ತಾನು ಸಮರ್ಪಕವಾಗಿ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದಾನೆ. ಇಂತಹ ವಾತಾವರಣದ ಹಿನ್ನೆಲೆಯಲ್ಲಿ ತನ್ನ ಬಳಕೆಯ ಪರಿಕರಗಳ ಬಗ್ಗೆ ಆಸ್ಥೆವಹಿಸುವದು ಸಂರಕ್ಷಿಸುವುದು ಇತನ ಕರ್ತವ್ಯವಾಗಿದೆ.

### ೩.೧.೧. ಸುಡುವ ಅಥವಾ ಹೊಗೆ ಬಡಿಸುವ ಕ್ರಮ

ಪಾರಂಪರಿಕ ಕೃಷಿ ಸಮುದಾಯಗಳಲ್ಲಿ ಈ ಪದ್ಧತಿಯನ್ನು ಕಾಣಬಹುದು ಕೃಷಿಗೆ ಪೂರಕವಾಗಿ ಬಳಸುವ ಕೊಡಲಿ, ಸಲಿಕೆ, ಗುದ್ದಲಿ, ಬಾರಕೊಲು (ಬಾರಕೋಲು, ಬ್ಯಾಕೋಲು) ಇತ್ಯಾದಿ ಲಘುವಸ್ತುಗಳಿಗೆ, ಕಾವಾಗಿ (ಕೊಡಲಿಕಾವು) ಕೋಲಾಗಿ ಬಳಸುವ ಕಟ್ಟಿಗೆಗಳನ್ನು ಕಡಿದು ತಂದು ಅಡಿಗೆ ಮನೆ ಅಟ್ಟ ಅಥವಾ ನೀರೋಲಿ, ಮೇಲಿನ ಅಟ್ಟದಲ್ಲಿಡುತ್ತಾರೆ. ದಿನ ನಿತ್ಯ ಬಡೆಯುವ ಹೊಗೆಯಿಂದ ಇಟ್ಟ ಪರಿಕರಗಳು ತನ್ನ ರಸತ್ವವನ್ನು ಕಳೆದು ಕೊಂಡು 'ಕಹಿ'ಯಾಗುತ್ತದೆ ಮತ್ತು ಬಿರುಸಾಗುತ್ತವೆ ಹೇಗೆ ಹೊತ್ತಿದ ಹಾಗು ಹೊಗೆಬಡಿದ ಅನ್ನವನ್ನು ಮುನುಷ್ಯ ಉಣ್ಣಲು ಸಾಧ್ಯವಿಲ್ಲವೋ ಹಾಗೆ ಹೊಗೆ ತಿಂದ ಕಟ್ಟಿಗೆ ಅಥವಾ ಪದಾರ್ಥವನ್ನು ಹುಳ ಮುಟ್ಟುತ್ತಿರಲಿಲ್ಲ 'ಕಹಿ' ಹಾಗು ಅದರ ಬಿರುಸುತನಗಳು ಹುಳು ದವಡೆಗೆ ಮುಳುವಾಗುತ್ತಿದ್ದವು[೨].

ಗ್ರಾಮಾಂತರ ಪ್ರದೇಶಗಳಲ್ಲಿ ಇನ್ನೂ ಒಂದು ಪಾರಂಪರಿಕ ಸಂರಕ್ಷಣಾ ವಿಧಾನ ಚಾಲ್ತಿಯಲ್ಲಿದೆ. ಅದೆಂದರೆ ಕೃಷಿ ಉಪಯೋಗಿ ಕಟ್ಟಿಗೆ ಸಲಕರಣೆಗಳನ್ನು ಹಸಿ ಮರದಿಂದ ಕಡಿದು ತಂದು ಹುಲ್ಲಿನ ಬೆಂಕಿಯಲಿಟ್ಟು ಬೇಯಿಸುತ್ತಾರೆ. ಬೇಯಿಸಿ ಅದರ ಮೇಲಿನ ತೊಗಟ್ಟೆಯನ್ನು(ಸಿಪ್ಪಿ) ಸುಲಿದು ಕಟ್ಟಿಗೆಯನ್ನು ಕೆಡಲಾರದಂತೆ. ಸಂರಕ್ಷಿಸಲಾಗುತ್ತಿತ್ತು. ಸುಲಿದ ತೊಗಟೆಯಿಂದ ಸಿಂಬಿಯನ್ನು ಮಾಡಿ ಅಡುಗೆ ಪಾತ್ರೆಗಳ ಕೆಳಗೆ ಅಥವಾ ಹಂಡೆ, ಹರವಿ, ಕೆಳಗೆ ಇಡಲು ಬಳಸುತ್ತಾರೆ. ಇದು ಪಾತ್ರೆಗಳು ಹೊರಳಾಡದಂತೆ ಇಟ್ಟ ಪದಾರ್ಥಗಳಿಗೆ ಹುಳು ಬಾರದಂತೆ ಸಂರಕ್ಷಣೆ ನೀಡುತ್ತದೆ. ಹೀಗೆ ಬರವಣಿಗೆಗೆ ಬಳಸುವ ಬೊಂಬಿನ ಹಲಗೆಯನ್ನು ೩ನೇ ಶತಮಾನದಲ್ಲಿ ಚೀಣಿಯರು ಬಳಸುವ ಮೊದಲು ಅವುಗಳನ್ನು ಬೆಂಕಿಗೆ ಹಿಡಿದು ಅವುಗಳಲ್ಲಿನ ರಸವು ಇಂಗುವಂತೆ ಮಾಡುತಿದ್ದ ಬಗೆ ತಿಳಿದು ಬರುತ್ತದೆ[೩]. ಈ ಕ್ರಮವು ಬರವಣಿಗೆಯ ಹಲಗೆಗಳಿಗೆ ಹುಳು ಹತ್ತದಂತೆ ಕಾಪಾಡುವುದಾಗಿತ್ತು. ಕರ್ನಾಟಕ ಗ್ರಾಮಾಂತರ ಪ್ರದೇಶಗಳಲ್ಲಿ ಕೃಷಿ ಪರಿಕರಗಳ ರಕ್ಷಣೆಗೆ ಬಳಸುತ್ತಿದ್ದ ಈ ಕ್ರಮವನ್ನು ಚೀನಾದಲ್ಲಿ ಈ ಬರವಣಿಗೆಯ ಪರಿಕರಗಳನ್ನು ರಕ್ಷಿಸಲು ಬಳಸುತ್ತಿದ್ದರು. ಇದು ಸಾಂಪ್ರದಾಯಿಕ ಸಂರಕ್ಷಣಾ ಕ್ರಮಗಳ ದೃಷ್ಟಿಯಿಂದ ಮಹತ್ವದ್ದು.

### ೩.೧.೨. ಧೂಪದ ಹೊಗೆ

ಸಾಂಪ್ರದಾಯಿಕ ಕುಟುಂಬಗಳಲ್ಲಿ ರಾತ್ರಿ ಹೊತ್ತು ಮನೆಯೊಳಗೆ ಹಾಗೂ ಹಟ್ಟಿಯೊಳಗೆ ದೂಪದ ಹೊಗೆಯನ್ನು ಹಾಕಲಾಗುತ್ತದೆ ಇಂದು ಕೂಡಾ ಹೊಟೇಲ್ಲುಗಳಲ್ಲಿ ಈ ಪದ್ಧತಿ

ಕಂಡು ಬರುತ್ತದೆ. ಚಿಕ್ಕ ಮಗುವನ್ನು ಎರೆದ–ಬಳಿಕ–ಧೂಪದ ಹೊಗೆ ನೀಡಲಾಗುತ್ತದೆ. ಕ್ರಿಮಿ ಕೀಟಗಳ ಹತೋಟಿ, ಬೂಷ್ಟು ನಿವಾರಣೆ ಹಾಗೂ ದುಷ್ಟ ಶಕ್ತಿಗಳ ನಿಯಂತ್ರಣದ ಸಂಗತಿಗಳಾಗಿ ಇವು ಕಾಣುತ್ತವೆ. ಆಧುನಿಕ ಸಂದರ್ಭದಲ್ಲಿ ಕೂಡಾ ಧೂಮ್ರಕಪಾಟುಗಳ ಸಹಾಯದಿಂದ ಗ್ರಂಥಗಳಿಗಡರುವ ಕೀಟಭಾದೆ ಹಾಗೂ ಬೂಷ್ಟು ನಿಯಂತ್ರಣ ಮಾಡಲಾಗುತ್ತದೆ. ಹೀಗೆ ಹವೆಯ ಒತ್ತಡದಿಂದ ಗ್ರಂಥರಕ್ಷಣೆ ಮಾಡುವುದನ್ನು ಮೊದಲು ಆರಂಭಿಸಿದವರು ಗ್ರೀಕರು. ಸಲ್ಫ್ಯೂರೋಡಿ ಕಾರ್ಬೋನಿಯೋ ರಾಸಾಯನಿಕ ವಸ್ತುವಿನಿಂದ ಈ ಪ್ರಯೋಗವನ್ನು ನಡೆಸಿದರು[೪]. ಮುಂದೆ ಈ ಕ್ರಮವನ್ನು ಮೆಲ್ಮಟ್ಟಕ್ಕೇರಿಸಿ ಸಂಸ್ಕರಿತ ವಿಧಾನವನ್ನು ಜಾರಿಗೊಳಿಸಿ ಗ್ರಂಥಗಳ ರಕ್ಷಣೆಗೆ ನಿಂತರು.

ಓಲೆಗರಿಗಳನ್ನು ಬರವಣಿಗೆಗೆ ಉಪಯೋಗಿಸುವ ಮೊದಲು ಬಿಸಿನೀರಿನಲ್ಲಿ ಕುದಿಸಿ ಒಣಗಿಸಲಾಗುತ್ತಿತ್ತು. ಇದೂ ಅಲ್ಲದೆ ಬೆಂಕಿಯ ಶಾಖ ತಾಗುವ ಜಾಗದಲ್ಲಿಡುತ್ತಿದ್ದರಲ್ಲದೆ ಅವುಗಳಿಗೆ ಸುಗಂಧಯುಕ್ತ ಧೂಪದಿಂದ ತಾಡಿಸುತ್ತಿದ್ದರು. ಹೀಗೆ ಹಸ್ತಪ್ರತಿಗಳನ್ನು ನಿರ್ಜಲೀಕರಿಸಿ ಶೇಖರಿಸಿ ಸಂರಕ್ಷಿಸಲಾಗುತ್ತಿತ್ತು.

### ೩.೧.೩. ಎಣ್ಣೆಗಳ ಬಳಕೆ

ಯೂರೋಪ ದೇಶಗಳಲ್ಲಿ ಕ್ರಿ.ಪೂ.ಸುಮಾರು ಮೂರು ಸಾವಿರ ವರ್ಷಗಳ ಹಿಂದೆ ಗ್ರಂಥ ಸಂರಕ್ಷಣೆಗೆ ದೇವದಾರು ಎಣ್ಣೆಯು ಅತ್ಯಂತ ಪರಿಣಾಮಕಾರಿ ಎಂಬ ಮಾತು ಚಾಲ್ತಿಯಲ್ಲಿತ್ತು ಹೊರೇಸ್ ಎಂಬಾತನು ದೇವದಾರು ಮರದ ಎಣ್ಣೆಗಳನ್ನು ಗ್ರಂಥಗಳಿಗೆ ಸವರಿ ಮೆರಗು ಕೊಟ್ಟು ಸೈಪ್ರೆಸ್ ಮರದಿಂದ ಮಾಡಿದ ಪೆಟ್ಟಿಗೆಗಳಲ್ಲಿಟ್ಟು ಸಂರಕ್ಷಿಸುವುದನ್ನು ವಿವರಿಸಿದ್ದಾನೆ "ಪ್ಲಿನಿದಿಎಲ್ಡರ್" ಎಂಬಾತನು ದೇವದಾರು ಎಣ್ಣೆಯನ್ನು ಉಪಯೋಗಿಸುತ್ತಿದ್ದ ಗ್ರಂಥಗಳನ್ನು"ನುಮ ಪಾರಿಪಿಲಿಸ್'' ಎಂಬುವವನ ಗೋರಿಯುಲ್ಲಿ ಐನೂರು ವರ್ಷಗಳಿಂದ ಒಳ್ಳೆಯ ಸ್ಥಿತಿಯಲ್ಲಿರುವುದನ್ನು ಕಡಿಂದ್ದಾನೆ ಹಸ್ತಪ್ರತಿಗಳ ಬಗ್ಗೆ ಹೇಳುವಾಗ 'ತೈಲಾದ್ರಕ್ಷಿತ್' ಎನ್ನವು ಮಾತನ್ನು ಬಹಳವಾಗಿ ಹೇಳಲಾಗುತ್ತದೆ. ಅಂದರೆ ಎಣ್ಣೆಯು ಗ್ರಂಥ ಹಾಗೂ ವಸ್ತುಗಳ ಸಂರಕ್ಷಣೆಯಲ್ಲಿ ಪ್ರಮುಖ ಪಾತ್ರವಹಿಸುತ್ತಿತ್ತು ಎನ್ನುವುದು ಕುತೂಹಲದ ಸಂಗತಿಯಾಗಿದೆ. ತಾಳೆಗರಿಗಳ ಸಂರಕ್ಷಣೆಯ ಇತ್ತೀಚಿನ ವಿಧಾನಗಳಲ್ಲಿ 'ಸಿಟ್ರನಲ್ ಆಯಿಲ್' ಮರ್ಕ್ಯುರಿಕ್ ಕ್ಲೋರೈಡ್" "ಡೈಲ್ಟ್ರಿನ್ ಮತ್ತು ಯಾರಯಾ ಫಾರ್ಮಲ್ ಡಿಹೈಡ್ ಮೊದಲಾದ ಎಣ್ಣೆಗಳನ್ನು ಬಳಸಲಾಗುತ್ತಿರುವುದು ಅಷ್ಟೇ ವಿಶೇಷ[೫] ಹೆಚ್ಚಿನ ಎಣ್ಣೆಗಳು ಸಸ್ಯಜನ್ಯವಾಗಿರುವುದು ವಿಶೇಷ.

ಶಾಸನಗಳ ವಿಚಾರವಗಿ, ಫ್ಲೀಟ್, ರೈಸ್ ರಂತಹ ವಿದ್ವಾಂಸರು ತಾವು ಸಂಪಾದಿಸಿದ `Anriquray of India' `Ephigraphay Karnataka' `South Indian Inscription' ಮುಂತಾದವು ಸಂಪುಟಗಳಲ್ಲಿ ಸಂವರ್ಧಿಸಿದ್ದಾರೆ. ಅಲ್ಲದೆ ಏಷ್ಯಾಟಿಕ್ ಸೋಸಾಯಿಟಿ' ಪ್ರಾಚ್ಯವಸ್ತು ಇಲಾಖೆ, ಪ್ರರಾಭಿಲೇಖನ ಇಲಾಖೆ' ಜಿಲ್ಲಾ ಪ್ರಾಚ್ಯವಸ್ತು ಸಂಗ್ರಾಲಯಗಳಲ್ಲಿ

ಸಂರಕ್ಷಿಸಿ ಇಡಲಾಗಿದೆ. 'ವರ್ಲ್ಡ್‌ಹೆರಿಟೇಜ್' ಕ್ಲಬ್‌ನವರು ಅದಕ್ಕಾಗಿಯೇ ವಿಶೇಷ ಶಿಬಿರಗಳನ್ನು ಹಮ್ಮಿಕೊಂಡಿರುವುದ, ವಿಶ್ವವಿದ್ಯಾನಿಲಯಗಳು ಪ್ರತ್ಯೇಕವಾದ ಅಧ್ಯಯನ ವಿಭಾಗವನ್ನು ಆರಂಭಿಸಿವೆ. (ಕ.ವಿ.ವಿ.ಹಂಪಿ.) ಅಲ್ಲದೆ ಅವುಗಳ ಸಂರಕ್ಷಣೆಯ ಜವಾಬ್ದಾರಿಯನ್ನು ನಿಭಾಯಿಸಲು 'ಡಿಪ್ಲೋಮಾ' ಕೋರ್ಸುಗಳನ್ನು ತೆರೆದಿವೆ ವಿಶ್ವ ಇತಿಹಾಸ ಪರಂಪರೆಯ ಪಟ್ಟಿಯಲ್ಲಿ ಸ್ಮಾರಕಗಳು ಮತ್ತು ದೇವಾಲಯಗಳು ಶಾಸನಗಳು ಸ್ಥಾನಪಡೆದು ಅನೇಕ ಶಾಸನಗಳು ತಮ್ಮ ಜೀವಂತಿಕೆಯನ್ನು ಕಾಯ್ದುಕೊಳ್ಳುವಲ್ಲಿ ಸಹಾಯಕವಾಗಿವೆ.

ಪಾರಂಪರಿಕ ಬದುಕಿನಲ್ಲಿ ಬೇವಿನ ಎಣ್ಣೆ, ಔಡಲಎಣ್ಣೆ, ಒಳ್ಳೆಣ್ಣೆಯನ್ನು ಕೀಟನಾಶಕವಾಗಿ ಬಳಸುವುದು ಕಾಣುತ್ತದೆ. ಉತ್ತರ ಕರ್ನಾಟಕದಲ್ಲಿ ಬೇವಿನ ಎಣ್ಣೆ ಮತ್ತು ಕುಸುಬಿ ಎಣ್ಣೆಗಳನ್ನು ವಿಶೇಷವಾಗಿ ಇಮಾರತಿಗಳ ಮರ ಮುಟ್ಟುಗಳ ರಕ್ಷಣೆಗೆ ಬಳಸಲಾಗುತ್ತದೆ. ಮನೆಗೆ ಹೋದಿಸಿದ ತೊಲೆ, ಜಂತಿ, ಹಲಗೆ ಬೊಂಬು ಹಾಗೂ ಬಳಕೆ ಕಪಾಟುಗಳಂಥ ದೀರ್ಘಕಾಲಿಕ ಬಳಕೆ ವಸ್ತುಗಳಿಗೆ ಈ ಎಣ್ಣೆಗಳನ್ನು ಲೇಪಿಸುತ್ತಿದ್ದರು. ಈ ಎಣ್ಣೆಗಳಿಗಿರುವ ಜಿಡ್ಡುತನ ಕಟ್ಟಿಗೆಯನ್ನು ಗಟ್ಟಿಗೊಳಿಸುವುದಲ್ಲದೆ ಹುಳುತಿನ್ನಲು ಬಿಡುವುದಿಲ್ಲ. ಮಾಠಮಾನ್ಯಗಳಲ್ಲಿರುವ ಹಸ್ತಪ್ರತಿಗಳ ಕಪಾಟು ಹಾಗೂ ರಕ್ಷಾಫಲಕಗಳಿಗೆ ಈ ಲೇಪನವನ್ನು ಬಳಸಿದ್ದು ಕಾಣುತ್ತದೆ. ಇದು ಸಾಮಾನ್ಯರಿಗೆ ಎಟುಕುವ ಸಂರಕ್ಷಣಾ ವಿಧಾನವಲ್ಲ ತುಂಬಾ ವೆಚ್ಚದಾಯಕವಾದ್ದು. ಪ್ರಸ್ತುತ ದಿನಮಾನಗಳಲ್ಲಿ ಒಳ್ಳೆಎಣ್ಣಿಯನ್ನು ರಾತ್ರಿವೇಳೆ ವಿದ್ಯುತ್ ಬಲ್ಬುಗಳನ್ನು ಆಕರ್ಷಿಸುವ ಕೀಟಗಳ ನಾಶಕ್ಕೆ ಬಳಸಲಾಗುತ್ತದೆ. ಒಂದು ಕಾಗದವನ್ನು ಒಳ್ಳೆಣ್ಣಿಯಲ್ಲಿ ಅದ್ದಿ ಬಲ್ಬಿನ ಹತ್ತಿರ ಕಟ್ಟಿದರೆ ಹುಳುಗಳು ಈ ಕಾಗದಕ್ಕೆ ಅಂಟಿ ಸಾಯುತ್ತವೆ. ಎಣ್ಣೆಯಲ್ಲಿರುವ ಜಿಡ್ಡು ಹುಳುಗಳು ಕಾಲು ಹಾಗೂ ಪುಕ್ಕವನ್ನು ಹಿಡಿದಿಟ್ಟು ಅವುಗಳ ಚಲನೆಯನ್ನು ನಿಷ್ಕ್ರಿಯಗೊಳಿಸುತ್ತದೆ. ಎಣ್ಣೆಗಳಲ್ಲಿ ದೇವದಾರು ಎಣ್ಣೆಯೇ ಕೀಟನಾಶಕ್ಕೆ ಮೊದಲು ಬಳಸಿದ ಎಣ್ಣೆಯಾಗಿದೆ.



### ೧.೪. ಬಟ್ಟೆಗಳು

ಗ್ರಂಥಗಳು ಹೊದಿಕೆಗೆ ಉಪಯೋಗಿಸುವ ಬಟ್ಟೆ ಸಾಮಾನ್ಯವಾಗಿ ಕಪ್ಪು, ಗಾಢನೀಲ, ಕೆಂಪು ಹಾಗೂ ಹಳದಿ ಬಣ್ಣದ್ದಾಗಿರುತ್ತದೆ. ಕಾರಣ ಈ ಬಣ್ಣಗಳಲ್ಲಿ ಕೀಟ ನಿರೋಧಕ ಶಕ್ತಿ ಇರುತ್ತದೆ. ಎಷ್ಟೋಸಾರಿ ಹಸಿರು, ಹಳದಿ, ಉಲ್ಲನ್‌ನಂತಹ ಬಟ್ಟೆಗಳ ಬಳಕೆ ನಿರ್ದಿಷ್ಟ ಧಾರ್ಮಿಕ ಪಂಥಗಳ ಸಂಕೇತಗಳಾಗಿಯೂ ಕೆಲಸ ಮಾಡುತ್ತವೆ. ಗ್ರಂಥ ಅಥವಾ ಮೌಲಿಕ ವಸ್ತುಗಳನ್ನು ಹತ್ತಿ ಬಟ್ಟೆಯಲ್ಲಿ ಸುತ್ತುವುದರಿಂದ ಮುಖ್ಯವಾಗಿ ಬೂಷ್ಟು, ಧೂಳು ಹಾಗೂ ಕೀಟಗಳಿಂದ ರಕ್ಷಿಸಬಹುದಾಗಿದೆ.

### ೧.೫. ಲಿಪೀಕರಣ ಮತ್ತು ಸಂಗೋಪನೆ

ಕಂಚೀಪುರಾಣದ ಒಂದು ಹಸ್ತಪ್ರತಿಯಲ್ಲಿ ಹಸ್ತಪ್ರತಿ ಸಂರಕ್ಷಣೆ ಹಾಗೂ ಸಂವರ್ಧನೆಯ

ಕಾರಣಗಳ ಉಲ್ಲೇಖವಿದೆ. "ಕಂಚೀ ವೀರರ ಕೃತಿ ಮೊದಲೋದಿದವರಿಗೆ ವಂಚನೆಯಿಲ್ಲ ಕೇಳ್ದ ಮನುಜರಿಗೆ ಪಂಚಮುಖನು ಪಾಲಿಸಲಿ' ಎನ್ನುವಲ್ಲಿ ಸಂಸ್ಕೃತಿಯಲ್ಲಿ ಕೃತಿರಚನೆ, ಪೋಷಣೆ ಹಾಗೂ ಆಲಿಸುವಿಕೆಯಂಥ ಕ್ರಿಯೆಗಳಿಗೆ ಮಹತ್ವವಿದೆ. ಮಳೆಗಾಗಿ, ಬೆಳೆಗಾಗಿ, ಆರೋಗ್ಯಕ್ಕಾಗಿ, ಸಂಕಟ ಪರಿಹಾರಕ್ಕಾಗಿ, ಜ್ಞಾನಾರ್ಜನೆಗಾಗಿ, ಸಂತಾನ ಫಲಕ್ಕಾಗಿ, ಕರ್ಮೋಪಶಮನಕ್ಕಾಗಿ, ಮುಕ್ತಿಗಾಗಿ ಹಸ್ತಪ್ರತಿಗಳ ಸಂಗೋಪನೆ ನಡೆದಿದೆ. ರಾಜನ ಸಪ್ತಸಂತಾನಗಳಲ್ಲಿ ಈ ಸಂಗ್ರಹ ಸಂಗೋಪನೆಯೂ ಪ್ರಮುಖವಾಗಿತ್ತು. ಒಂದು ಹಸ್ತಪ್ರತಿ ಹಾಗೂ ಅದರೊಳಗಿನ ಪಠ್ಯವು ಹಲವು ಕಾರಣಗಳಿಗಾಗಿ ಮರುರಚನೆಗೊಳ್ಳುತ್ತಿತ್ತು ಹಾಗೂ ಸಂಗೋಪನೆಗೊಳ್ಳುತ್ತಿತ್ತು.

ಹಸ್ತಪ್ರತಿ ಸಂರಕ್ಷಣೆಯ ಈ ಕ್ರಮ ಸಂಗೋಪನೆಯೊಂದಿಗೆ ಸಂವರ್ಧನ ಮನೋಭಾವವನ್ನು ಹೊಂದಿತ್ತು. ಭಾರತದಲ್ಲಿ ಇಂದು ಹಸ್ತಪ್ರತಿಗಳು ನಮಗೆ ದೊರೆತಿದ್ದರೆ ಸಂಚಿತ ಸಂಗ್ರಹಗಳಿಂದಲ್ಲ. ಬದಲಾಗಿ ಲಿಪಿಕಾರರು ಹಾಗೂ ಪೋಷಕರ ಶ್ರಮದಿಂದ. ಲಿಪಿಕಾರರ ಬಗ್ಗೆ ಗ್ರಂಥಸಂಪಾದನೆ ಹಾಗೂ ಹಸ್ತಪ್ರತಿ ಅಧ್ಯಯನದ ಸಂದರ್ಭಗಳಲ್ಲಿ ತುಂಬಾ ಅವಜ್ಞತೆ ಇದೆ. ಆದರೆ ಕವಿಯನ್ನು ಹಾಗೂ ಆತನ ಕೃತಿಯನ್ನು ನಮಗೆ ದಕ್ಕಿಸುವಲ್ಲಿ ಲಿಪಿಕಾರನ ಪಾತ್ರ ಬಹುಮುಖ್ಯವಾಗಿದೆ. ಕನ್ನಡದ ಸಂದರ್ಭದಲ್ಲಿ ಆದಿಕವಿ ಪಂಪ ಕೃತಿ ರಚಿಸಿದ್ದು ೧೦ನೇ ಶತಮಾನದಲ್ಲಿ. ಆದರೆ ಆತನ ಕೃತಿ ವಿಕ್ರಮಾರ್ಜುನ ವಿಜಯದ ಪ್ರತಿ ಸಿಕ್ಕಿದ್ದು ೧೫ನೇ ಶತಮಾನದಲ್ಲಿ. ಇದು ಪಂಪನ ನೇರ ಕೈಬರಹ ಅಲ್ಲ ಎಂಬುದು ಗಮನಾರ್ಹ.

ಮಧ್ಯಕಾಲೀನ ಕನ್ನಡ ಸಾಹಿತ್ಯ ಹಾಗೂ ಸಾಂಸ್ಕೃತಿಕ ಸಂದರ್ಭದಲ್ಲಿ ಸಂಗ್ರಹ, ಸಂಗೋಪನೆ ಹಾಗೂ ಸಂಪಾದನೆ ಕ್ರಿಯೆಗಳು ಬಹಳ ಚುರುಕಾಗಿ ನಡೆದಿದ್ದವು. ೧೨ನೇ ಶತಮಾನದಲ್ಲಿ ಶಿವಶರಣರಿಂದ ರಚಿತವಾದ ವಚನಗಳೆಲ್ಲಾ ೧೫ ರಿಂದ ೧೬ನೇ ಶತಮಾನದವರೆಗೂ ವಿವಿಧ ರೀತಿಯಲ್ಲಿ ಸಂಗೋಪನೆ ಹಾಗೂ ಸಂಪಾದನೆಗೊಂಡವು. ಏಕೋತ್ತರ ಶತಸ್ಥಲ, ಶೂನ್ಯಸಂಪಾದನೆಗಳಂಥ ಕೃತಿಗಳು ವಚನಸಾಹಿತ್ಯದ ಮರುಹುಟ್ಟಿಗೆ ಕಾರಣವಾದವು. ಇಂಥಲ್ಲಿ ಸಂಗೋಪನೆ ಎನ್ನುವುದು ಭೌತಿಕ ಸಂರಕ್ಷಣೆ ಮಾತ್ರವಾಗಿರದೆ ಅದು ಆ ಕಾಲದ ಸಾಹಿತ್ಯ ಸಂಸ್ಕೃತಿಗಳನ್ನು ಜೀವಂತವಾಗಿ ಮರುರೂಪಿಸುವುದಾಗಿತ್ತು. ಈ ಕಾಲಘಟ್ಟವನ್ನು ವೀರಶೈವ ಸಾಹಿತ್ಯದ 'ಸಂಗೋಪನ ಸಮಯ', 'ಸಂಪಾದನಾ ಸಮಯ' ಎಂದು ಗುರುತಿಸಲಾಗುತ್ತದೆ. ಲಿಖಿತ ರೂಪದಲ್ಲಿ, ಮೌಖಿಕ ರೂಪದಲ್ಲಿ, ವಸ್ತುರೂಪದಲ್ಲಿ ನಡೆದ ಈ ಸಂದರ್ಭದ ಸಂಗೋಪನ ಚಟುವಟಿಕೆಗಳು ಒಂದು ಸಾಂಸ್ಕೃತಿಕ ಸಂವರ್ಧನ ರೂಪಿ ಗುಣವುಳ್ಳವಾಗಿದ್ದವು. ಅಂದರೆ ಬ್ರಿಟಿಷ್ ಕಲ್ಪನೆಯ ವಸ್ತುರೂಪಿ ಸಂಗೋಪನ ಗುಣಕ್ಕಿಂತ ಭಿನ್ನವಾಗಿದ್ದವು.

ಇಂಥ ಭಿನ್ನತೆಗೆ ಕಾರಣ ಕನ್ನಡ ಸಂದರ್ಭದಲ್ಲಿ ದೊರೆಯುವ ಹಲವು ವರ್ಗದ ಲಿಪಿಕಾರರು, ಲಿಪಿಕಾರ್ತಿಯರು, ಪೋಷಕರು ಹಾಗೂ ಪ್ರತಿಫಲಾಪೇಕ್ಷಿಗಳು. ಇವರೆಲ್ಲರಿಗೂ ಒಂದು ನೆಲೆ ನೀಡಿದ್ದು ವಚನ ಚಳುವಳಿ, ಹಸ್ತಪ್ರತಿ ಲಿಪೀಕರಣ, ಸಂಪಾದನೆ, ಸಂಗೋಪನೆಗಳು ಕಾಯಕವಾಗಿ

ಮಾರ್ಪಟ್ಟ ಕಾಲವದು. ವಿಶೇಷವಾಗಿ ದಕ್ಷಿಣ ಭಾರತ ಮಟ್ಟದಲ್ಲಿ ನಡೆದ ಭಕ್ತಿ ಚಳುವಳಿಗಳ, ಧಾರ್ಮಿಕ ಬೋಧನೆಯ ಜನಪ್ರಿಯ ವಿಧಾನಗಳು, ಹಸ್ತಪ್ರತಿಗಳು ಬಹುಪತ್ಯಗಳಾಗಿ ಸಂಸ್ಕೃತಿ ಸಂವರ್ಧನೆಯ ಸಾಧನಗಳಾಗಿ ರೂಪಗೊಳ್ಳಲು ಕಾರಣವಾದವು.

ರಾಜರಿಂದ ಹಿಡಿದು ಶ್ರೀಸಾಮಾನ್ಯನವರೆಗೂ ಸಂಸ್ಕೃತಿ ಸಂವರ್ಧನಾ ಕಾರ್ಯ ನಿರಂತರವಾಗಿ ನಡೆಯುತ್ತಿತ್ತು. ಹೀಗಾಗಿ ಅರಮನೆ, ಗುರುಮನೆ, ಮಠ-ಮಸೀದಿ, ಬಸದಿ ಸಾಹಿತ್ಯಾಭಿಮಾನಿಗಳ ಮನೆಯಲ್ಲಿ ಗ್ರಂಥ ಸಂಗೋಪನಾ ಕಾರ್ಯಗಳು ನಡೆಯುತ್ತಿದ್ದವು. ಜೀರ್ಣಪ್ರತಿಗಳ ಹೊಸ ಬರವಣಿಗೆ ತಮ್ಮಲ್ಲಿ ಇಲ್ಲದ ಕೃತಿಗಳನ್ನು ಪ್ರತಿಮಾಡಿ ತರಿಸಿಕೊಳ್ಳುವುದು ಸ್ಥಳೀಯ ಕೃತಿಕರ್ತರ ಗ್ರಂಥಗಳನ್ನು ಪ್ರತಿಮಾಡಿಸಿ ಬೇರೆ ಗ್ರಂಥಾಲಯಗಳಿಗೆ ಕಳಿಸುವುದು ಕೂಡ ಪಾರಂಪರಿಕ ಗ್ರಂಥ ಸಂರಕ್ಷಣೆಯ ಭಾಗವಾಗಿತ್ತು. ಕ್ರಿ.ಶ. ೧೯೦೬ ಹಾಗೂ ೧೧೪೩ರ ಕಾಲಘಟ್ಟದಲ್ಲಿ ಹೈಮಂ ವ್ಯಾಕರಣವನ್ನು ಏಷ್ಯಾ ಖಂಡದಲ್ಲಿ ಪ್ರಚಾರಕ್ಕೆ ತರಲಾಯಿತು. ಅದಕ್ಕಾಗಿ ३೦೦ ಜನ ಲಿಪಿಕಾರರನ್ನು ನೇಮಿಸಿಕೊಂಡು ಮೂರು ವರ್ಷಗಳ ಕಾಲ ಒಂದು ಲಕ್ಷದ ಇಪ್ಪತ್ತೈದು ಸಾವಿರ ಪ್ರತಿಗಳನ್ನು ಮಾಡಿಸಿ ಪರ್ಷಿಯಾ, ಶಿಲೋನ್, ನೇಪಾಳ, ಭರತ ಖಂಡದ ಇತರೆ ಗ್ರಂಥ ಭಂಡಾರಗಳಿಗೆ ಕಳಿಸಿದ್ದು ತಿಳಿದುಬರುತ್ತದೆ.

**೧.೬. ಧಾರ್ಮಿಕ ಸಂಗೋಪನೆ**

ಹಸ್ತಪ್ರತಿಗಳ ರಚನೆ ಹಾಗೂ ಸಂಗೋಪನಾ ಚಟುವಟಿಕೆಗಳು ತುಂಬಾ ಧಾರ್ಮಿಕಾವರಣದಲ್ಲಿ ಬೆಳೆದುಬಂದಿರುವಂಥದ್ದು. ಗ್ರಂಥರಕ್ಷಣೆ ಗ್ರಂಥದಾನ ಎನ್ನುವುದು ಪುಣ್ಯಕಾರ್ಯವಾಗಿತ್ತು. ಪಾರಭೌತಿಕ ಹಾಗೂ ಪಾರಲೌಕಿಕ ಸಂಗತಿಗಳನ್ನು ತಿಳಿಸುವಾಗ ಹಸ್ತಪ್ರತಿಗಳನ್ನು ಅಸ್ತಿತ್ವದ ರೂಪದಲ್ಲಿ ತೋರಿಸುವುದುಂಟು. ೧೨ನೇ ಶತಮಾನದ ಕರ್ನಾಟಕದ ಶರಣ ಚಳುವಳಿಯ ಮೂರ್ತಿಗಿಂತ ವಚನ ಕಟ್ಟುಗಳನ್ನೆ (ಹಸ್ತಪ್ರತಿಗಳ ಕಟ್ಟುಗಳು) ದೇವರೆಂದು ಪರಿಭಾವಿಸುತ್ತ, ಪೋಷಿಸುತ್ತ ಬಂತು. ಈ ಕಾರಣವಾಗಿ ಕರ್ನಾಟಕದ ಕೊಡೆಕಲ್, ನವಲಗುಂದ, ಕೋಡಿಮಠ, ಅಮೀನಗಡ, ಬಬಲಾದಿ ಮುಂತಾದ ಸ್ಥಳಗಳಲ್ಲಿ ದೈವೀರೂಪದಲ್ಲಿ ಸಂರಕ್ಷಿತ ಹಸ್ತಪ್ರತಿಗಳನ್ನು ಕಾಣುತ್ತೇವೆ. ಶ್ರವಣಬೆಳಗೊಳದ ಜೈನ ಮಠದಲ್ಲೂ ದವಳ ಮಹಾದವಳದಂಥ ಅಪೂರ್ವ ಸಂರಕ್ಷಿತ ಹಸ್ತಪ್ರತಿಗಳನ್ನು ಕಾಣುತ್ತೇವೆ. ವರ್ಷಕ್ಕೊಮ್ಮೆ ಸ್ಥಳೀಯ ಸಾಂಸ್ಕೃತಿಕ ಬದುಕಿನ ಆಗು ಹೋಗುಗಳ ನಿರ್ಧಾರಕಗಳಾಗಿ ಕೆಲಸ ಮಾಡುತ್ತಿರುವ ಇಂಥ ಸಂರಕ್ಷಿತ ಹಸ್ತಪ್ರತಿ ನೆಲೆಗಳು ಪಾರಂಪರಿಕ ಸಂರಕ್ಷಣಾ ಕ್ರಮಗಳನ್ನು ಪಾಲಿಸುತ್ತಿರುವುದು ಗಮನಾರ್ಹ.

**ಅಡಿ ಟಿಪ್ಪಣಿಗಳು**

೧. ವ್ಹಿ.ಎಸ್. ಬಡಿಗೇರ; ಪಾರಂಪರಿಕ ಸಂರಕ್ಷಣಾ ಕ್ರಮಗಳಲ್ಲಿ ಸಂಸ್ಕೃತಿ ಸಂವರ್ಧನಾ ಪ್ರಮೆಯಗಳು.

೨. ಪೂರ್ವೋಕ್ತ ಪುಟ, ೨

೩. ಪೂರ್ವೋಕ್ತ ಪುಟ, ೨

೪. ಪೂರ್ವೋಕ್ತ ಪುಟ, ೩

೫. ಪೂರ್ವೋಕ್ತ ಪುಟ, ೩

೬. ಪೂರ್ವೋಕ್ತ ಪುಟ, ೪

೭. ಪೂರ್ವೋಕ್ತ ಪುಟ, ೪



ಸಂಗ್ರಹ–ಸಂರಕ್ಷಣೆ–ಸಂವರ್ಧನೆ ಎನ್ನುವ ಪರಿಕಲ್ಪನೆಗಳು ಒಂದು ಸಾಮಾಜಿಕ ಜೀವನದ ಸಾಮಾಜಿಕ ವಾಸ್ತವತೆಯ ಸೈದ್ಧಾಂತಿಕ ಉತ್ಪನ್ನಗಳು. ಇಂಥಲ್ಲಿ ಶಾಸ್ತ್ರ ಎನ್ನುವು ಪರೀಕ್ಷೆಗೆ ಒಳಗಾಗದಂಥ 'ಶುದ್ಧ' ವೈಚಾರಿಕತೆಯ ಹೆಸರಿನಲ್ಲಿ ಕೂದಲು ಸೀಳುವ ನಿರರ್ಥಕ ವಾಗ್ವಾದಗಳಲ್ಲಿ ತೊಡಗುವುದಲ್ಲ. ಅದರ ಮುಖ್ಯಗುರಿ ಅನುಭವ ಪ್ರಧಾನವಾದ ಆಚರಣಾತ್ಮಕವಾದ ಪ್ರಯೋಗಶೀಲತೆಯತ್ತ ಸಾಗುವುದು. ಅದೊಂದು ನೇರ, ಸರಳ ಹಾಗೂ ಪುಷ್ಟವಾದ ತಿಳಿವಳಿಕೆಯ ಆಗರ. ಅದು ಸಂಕೀರ್ಣ ರಾಸಾಯನಿಕದಾಗರವಲ್ಲ. ನಿರಂತರತೆ ಸಾಂಪ್ರದಾಯಿಕ ಸಂಗ್ರಹಣೆಯ ಮುಖ್ಯಗುಣ. ಅದು ಮುಗಿಯುವ ಹಾಗೂ ಇರುವ, ಸಾಯುವ ಹಾಗೂ ಹುಟ್ಟುವ ಸರಪಳಿಯ ರೂಪದ್ದು. ಅಂದರೆ ಸಾಯುವ ಮೊದಲೇ ಹುಟ್ಟುವಂಥದ್ದು. ಮುಗಿಯುವ ಮೊದಲೆ ವೃದ್ಧಿಯಾಗುವಂಥದ್ದು. ಒಮದರೆ ನಿಷ್ಕ್ರಿಯತೆ ಮುಂದಿನದರ ಸಕ್ರಿಯತೆಯಲ್ಲಿ ಗತಶೀಲತೆಯನ್ನು ಪಡೆದುಕೊಳ್ಳುತ್ತದೆ. ಈ ಬೆಳಕಿನಲ್ಲಿ ಸಂಬರ್ಧನೆಯನ್ನು ಇಲ್ಲಿ ವ್ಯಾಖ್ಯಾನಿಸಿಕೊಳ್ಳಲಾಗಿದೆ.

ನಮ್ಮ ಪಾರಂಪರಿಕ ಜ್ಞಾನ ಸಾಮಗ್ರಿಗಳಾಗಲೀ, ಕೃಷಿ ಪರಿಕರಗಳಾಗಲೀ, ದಿನಬಳಕೆಯ ವಸ್ತುಗಳಾಗಲೀ ಒಂದಲ್ಲಾ ಒಂದು ರೀತಿಯಿಂದ ನಮ್ಮಿಂದ ನಷ್ಟವಾಗುವ ಪರಿಪಾಠವನ್ನು ನಾವು ನೋಡಿದ್ದೇವೆ. ಅಂತಹ ನಷ್ಟದಲ್ಲಿರುವ ಪರಿಕರಗಳನ್ನು ಸಂಗ್ರಹಿಸುವುದು, ಸಂರಕ್ಷಿಸುವುದರೊಂದಿಗೆ ಸಂವರ್ಧಿಸುವುದು ತುಂಬಾ ಶ್ರಮದಾಯಿಕ ಕೆಲಸವದು.

ಒಂದೇ ಪರಿಸರದಲ್ಲಿ ಅಜ್ಜ, ಮಗ, ಮೊಮ್ಮಕ್ಕಳು, ಭೂತ, ವರ್ತಮಾನ ಹಾಗೂ ಭವಿಷತ್ ಕಾಲಗಳ ಪ್ರತೀಕಗಳಾಗಿ ಬದುಕುತ್ತಾರೆ. ಪರಸ್ಪರ ಅವಲಂಬಿಸಿ, ಸಂರಕ್ಷಿಸಿ, ಸಂಗೋಪನೆ ಹಾಗೂ ಸಂತಾನದ ಮುಂದುವರಿಕೆಯ ಕ್ರಮಗಳನ್ನು ಕಾಣುತ್ತೇವೆ. ಹಾಗೇಯೆ ನಮ್ಮ ಸಂಸ್ಕೃತಿಯ ಜೀವನಾಡಿಗಳಾದಂತ ಹಸ್ತಪ್ರತಿಗಳು, ಶಾಸನಗಳು, ಕೃಷಿ ಉಪಕರಣಗಳನ್ನು ಸಂಗೋಪನೆ ಮಾಡುವಂತ ಜವಾಬ್ದಾರಿಯನ್ನು ಕಂಡುಕೊಳ್ಳಬೇಕಾಗಿದೆ.

## ೪.೧. ಆಹಾರ ಪದಾರ್ಥಗಳು

ಪ್ರಾಕ್ತನ ಕಾಲದಿಂದಲೂ ನಮ್ಮ ಪುರಾತನರು ಆಹಾರ ಸಂರಕ್ಷಣೆಯ ಬಗ್ಗೆ ತಮ್ಮದೇಯಾದ ನಿಲುವನ್ನು ತಳೆದುಕೊಂಡಿದ್ದಾರೆ. ಆದಿ ಮಾನವನು ಅಲೆಮಾರಿ ಸಂಸ್ಕೃತಿಯನ್ನು ಬಿಟ್ಟು ಬಂದು ಒಂದೆಡೆ ನೆಲೆಸುವುದನ್ನು ಕಲಿತುಕೊಂಡನೋ ಅಂದಿನಿಂದ ಅವನಿಗೆ ಆಹಾರದ ಅವಶ್ಯಕತೆಯುಂಟಾಯಿತು. ಬೇಸಿಗೆಯಲ್ಲಿ ಬೇಟೆಯಾಡಿ ಉದರ ತುಂಬಿಸುವ ಪ್ರವೃತ್ತಿ ಇದ್ದರೂ ಎಲ್ಲ ಸಮಯದಲ್ಲಿ ಅದು ಅಸಾಧ್ಯವೆನಿಸಿತ್ತು. ಕೃಷಿ ಉತ್ಪನ್ನವನ್ನು ವಿದ್ಯುಕ್ತವಾಗಿ ಅನುಭೋಗಿಸುವುದನ್ನು ಎಂದು ಕಲಿತನೋ ಅಂದಿನಿಂದ ಸಂಗ್ರಹಣೆ, ಸಂರಕ್ಷಣೆ, ಸಂವರ್ಧನೆಯ ಅಂಶಗಳನ್ನು ಕಂಡುಕೊಂಡನು. ಫಲವತ್ತಾದ ಎರೆ ಭೂಮಿಯಲ್ಲಿ ಬೆಳೆದ ಪೈರನ್ನು ಅಥವಾ ತೆನೆಯನ್ನು ಕೊಯ್ದುಕೊಂಡು ಅದಕ್ಕೆ ಕೈಮಣ್ಣು ಸುಣ್ಣವನ್ನು ಸವರಿ ಅದನ್ನು ಕಲಸುವಾಗ ಅದರಲ್ಲಿ ನುಸಿಪುಡಿಯನ್ನಾಗಲಿ ಇಲ್ಲವಾದಲ್ಲಿ ನೀಲಿತತ್ತೆ, ಬೇವಿನ ಎಲೆಗಳನ್ನು ಮಿಶ್ರಣ ಮಾಡುತ್ತಿದ್ದರು. ಇದರಿಂದ ಕ್ರಿಮಿಕೀಟ, ಇಲಿ ಮುಂತಾದ ಭಾಧಕ ಜೀವಿಗಳನ್ನು ನಾಶ ಮಾಡಲು ಈ ಪದ್ಧತಿ ಫಲಕಾರಿಯಾಗಿದೆ. ಉತ್ತರ ಕರ್ನಾಟಕದಲ್ಲಿ ಜೋಳವು ಒಂದು ಪ್ರಧಾನ ಬೆಳೆಯಾಗಿರುವುದಲ್ಲದೆ ಅದಕ್ಕೂ ಮುಖ್ಯವಾಗಿ ಅದೊಂದು ಪ್ರಧಾನ ಆಹಾರ ಬೆಳೆ ಆದದ್ದರಿಂದ ವರ್ಷವಿಡೀ ಉಪಜೀವನಕ್ಕೆ ಬೇಕಾಗುವಷ್ಟನ್ನು ತಮ್ಮಲ್ಲಿರಿಸಿಕೊಳ್ಳುತ್ತಿದ್ದರು. ತಮ್ಮಲ್ಲಿಟ್ಟುಕೊಂಡು ಚೀಲತುಂಬಿಕೊಳ್ಳುತ್ತಿದ್ದರು. ಆದರೆ ಮಳೆಗಾಲದಲ್ಲಿ ಸುರಿಯುವ ಮಳೆಯಿಂದ ಹಳ್ಳಿಗಾಡಿನ ಮನೆಗಳು ಸೋರುತ್ತಿದ್ದವು. ಈ ಸಂದರ್ಭದಲ್ಲಿ ಚೀಲಗಳಲ್ಲಿ ತುಂಬಿದ ಜೋಳದ ಕಾಳುಗಳು ಅಪಾರ ಪ್ರಮಾಣದಲ್ಲಿ ಹಾಳಾಗುತ್ತಿದ್ದವು. ಈ ಸಮಸ್ಯೆಯಿಂದ ಮುಕ್ತರಾಗಲು ಅವರು ಕಂಡುಕೊಂಡ ಮಾರ್ಗವೇ 'ಹಗೆ'ಯನ್ನು ನಿರ್ಮಾಣ ಮಾಡುವುದು. ತಾವು ನಿರ್ಮಿಸಿದ ಈ 'ಹಗೆ'ಯಲ್ಲಿ ಧಾನ್ಯಗಳನ್ನು ಸಂಗ್ರಹಿಸುತ್ತಿದ್ದರು. ಅಲ್ಲದೆ ಸಂಗ್ರಹದೊಂದಗೆ ಸಂರಕ್ಷಣೆ ಮುಂದಿನ ಭವಿಷ್ಯಕ್ಕೆ ಉಪಜೀವನವನ್ನು ನಡೆಸಲಿಕ್ಕೆ ಮಾರ್ಗವಾಗುತ್ತಿತ್ತು.

ಗ್ರಾಮೀಣ ಸಂಪ್ರದಾಯದಲ್ಲಿರುವ ಕೆಲವು ಸಂವರ್ಧನಾ ಪ್ರಮೇಯಗಳು ಬಹಳ ಕುತೂಹಲವಾದಂಥವಾಗಿವೆ. ಉದಾಹರಣೆಗೆ ಆಹಾರ ಧಾನ್ಯಗಳಾದ ಗೋದಿ ಅಥವಾ ಜೋಳದಂಥ ಯಾವುದೇ ಪದಾರ್ಥಗಳು ಮುಗಿದಾಗ ಮುಗಿದುಹೋದ ಪಾತ್ರೆ ಅಥವಾ ಚೀಲದಲ್ಲಿ ಒಂದು ಮುಷ್ಠಿಯಷ್ಟು ಕಾಳುಗಳನ್ನು ಬೇಕಂತೆ ಬಿಡಲಾಗುತ್ತದೆ. ಬುಟ್ಟಿಯಲ್ಲಿ ರೊಟ್ಟಿ ಅಥವಾ ಅನ್ನ ಮುಗಿದಾಗ ಒಂದು ತುತ್ತಿನಷ್ಟು ಆಹಾರವನ್ನು ಆ ಪಾತ್ರೆಯಲ್ಲಿ ಬಿಡಲಾಗುತ್ತದೆ. ಇದಕ್ಕೆ "ತಳಹರಿಯಬಾರದು" ಎನ್ನುವ ಪರಿಭಾಷೆಯನ್ನು ಅವರು ಬಳಸುತ್ತಾರೆ. ಅಂದರೆ ಯಾವ ಪದಾರ್ಥವು ಮುಗಿದುಹೋದ ವಸ್ತುವಲ್ಲ. ಅದು ನಿರಂತರವಾಗಿರುವಂಥದ್ದು. ಕೊನೆ ಎನ್ನುವುದು ಅದಕ್ಕಿಲ್ಲ 'ಆಯಿತು' ಎಂದು ಭಾವಿಸಿದರೆ ಅದು ಕೇಡಿಗೆ ಮೂಲವಾಗುತ್ತದೆ 'ಮುಗಿಯಿತು' ಎನ್ನುವ ಬದಲು ಅದಕ್ಕೆ 'ಬೆಳೆಯಿತು' ಎಂದುಸೂಚ್ಯವಾಗಿ ಹೇಳುವುದನ್ನು

ಕಾಣಬಹುದು. ಒಂದು ಆವರ್ತನಶೀಲ ಚಿಂತನೆಯನ್ನು ಇಂಥಲ್ಲಿ ಕಾಣುತ್ತೇವೆ. ಅಂದರೆ ಸಂಗ್ರಹ-ನಿರ್ವಹಣೆ ಹಾಗೂ ಸಂವರ್ಧನೆ ಒಂದು ಸಾವಯವ ಸಾತತ್ಯವಿರುವುದನ್ನು ಇಥಲ್ಲಿ ಕಾಣಬಹುದು. ತುಂಬಿದ ಜೋಳದ ಹೊಲದಲ್ಲಿಯ ಕೆಲವು ಸಮೃದ್ಧ ತೆನೆಗಳನ್ನು ಕೊಯ್ದು ಸಂರಕ್ಷನೆ ಇಡುತ್ತಾರೆ. ಇವುಗಳಿಗೆ 'ಬೀಜೇರಿ ತೆನಿ' ಅಥವಾ 'ಬೀಜೇರಿ ಜೋಳ' ಎಂದು ಕರೆಯುತ್ತಾರೆ. ಉಳಿದ ತೆನಿಯ ಕಾಳುಗಳನ್ನು ಬಿಡಿಸಿ ತಮ್ಮ ಆಹಾರ ಧನ್ಯವಾಗಿ ಬಳಸುತ್ತಾರೆ. ಮರುವರುಷ ವಿಶೇಷವಾಗಿ ಆಯ್ದು ಸಂಗ್ರಹಿಸಿ ಸಂರಕ್ಷಿಸಿ ಇಟ್ಟ ಕಾಳುಗಳನ್ನು ಹದಗೊಳಿಸಿದ ಭೂಮಿಗೆ ಬಿತ್ತಿ ಬೆಳೆಯುತ್ತಾರೆ. ಈ ಕ್ರಿಯೆಗೆ ಕೊನೆ ಎಂಬುದೇ ಇಲ್ಲ. ಇದೊಂದು ಅನುಭವ ಹಾಗೂ ಅಗತ್ಯ ಸಾವಯವ ತಾಂತ್ರಿಕತೆಯಾಗಿತ್ತು ಎನ್ನುವುದು ಗಮನಾರ್ಹ. ಸಂಗ್ರಹ ಸಂವರ್ಧನೆಯ ಮೂಲಧಾತು ಎನ್ನುವುದು ಇಂಥಲ್ಲಿ ಮನಗಾಣಬಹುದು.

### ೪.೨. ಉಡುಗೆ-ತೊಡುಗೆ

ಶಿಲಾಯುಗಕ್ಕಿಂತಲೂ ಪೂರ್ವದಲ್ಲಿ ಮನುಷ್ಯ ಅಲೆಮಾರಿಯಾಗಿ ಪ್ರಾಣಿಗಳಲ್ಲಿ ಪ್ರಾಣಿಯಾಗಿ ಅಲೆಯುತ್ತಿದ್ದನು. ಎಂದು ಅವನಿಗೆ ಸಂಘಜೀವನದ ಸುಖಗೊತ್ತಾಯಿತೋ ಅಂದಿನಿಂದ ಒಟ್ಟಾಗಿರುವುದನ್ನು ರೂಢಿಸಿಕೊಂಡು ಬಂದನು. ಅದರಿಂದಾಗಿ ಲಾಭಕ್ಕೆ ಎನೆಯೇ ಇಲ್ಲದಂತಾಗಿತ್ತು. ಈ ಹಂತದಲ್ಲಿ ಮೊದಲು ಮರದ ತೊಗಟೆಯನ್ನು, ಎಲೆಗಳನ್ನು ಸುತ್ತಿಕೊಳ್ಳುತ್ತಿದ್ದನು. ಕ್ರಮೇಣ ಕಾಡುಪ್ರಾಣಿಗಳ ಚರ್ಮವನ್ನು ಸುತ್ತಿಕೊಂಡು ಚಳಿಯಿಂದ ರಕ್ಷಣೆಯನ್ನು ಪಡೆದುಕೊಂಡನು. ಕಾಲ ಬದಲಾದಂತೆಲ್ಲಾ ಆತನ ಬೌದ್ಧಿಕ ಆಯಾಮವು ಕೂಡ ವಿಭಿನ್ನವಾಯಿತು. ಈ ವಿಚಾರಪರತೆ ಆತನನ್ನು ಸಂಶೋಧನೆಯಲ್ಲಿ ತೊಡಗಿಸಿತು. ಈ ಶೋಧನೆಯ ಫಲವಾಗಿ ಅವನು ಹತ್ತಿಯನ್ನು ಉಪಯೋಗಿಸಿಕೊಂಡು ನೂಲು ತಯಾರಿಸಿಕೊಂಡು ಸರ್ವಜ್ಞ ಹೇಳುವಂತೆ "ಮೇಟಿಂ, ರಾಟಿಯಿಂದ"[೧] ಈ ಒಂದು ಕೃಷಿಯಿಂದ ಇನ್ನೊಂದು ನೂಲನ್ನು ಉತ್ಪಾದಿಸುವ ರಾಟಿಯಿಂದ ಜಗತ್ತು ನಿರ್ಬಯವಾಗಿ ನಡೆಯುತ್ತದೆ. ಆದ್ದರಿಂದ ಆ ಬಟ್ಟೆಯನ್ನು ಸಂರಕ್ಷಿಸುವುದು ಅಚ್ಚುಕಟ್ಟಾಗಿಟ್ಟುಕೊಳ್ಳುವುದು ಅವಶ್ಯವಾಗಿರುತ್ತದೆ.

ಮೊದಲಿಗಿಂತಲೂ ಈಗ ಬಟ್ಟೆಯ ಬಗೆಗಿನ ಕಾಳಜಿ ತುಂಬಾ ಉನ್ನತಮಟ್ಟದ್ದಾಗಿದೆ. ಉತ್ತಮ ಶಿಥಲ ನಿಧನಕಾರಕವನ್ನು ಬಳಸಿ ಬಟ್ಟೆಗಳನ್ನು ತಯಾರಿಸುತ್ತಾರೆ. ಉತ್ತಮ ಮತ್ತು ಬೆಲೆಬಾಳುವ ವಸ್ತುಗಳನ್ನು ಸಂರಕ್ಷಿಸಿ ಇಡುವುದು ಒಂದು ಕಲೆಯೇ. ಉಪಯೋಗಿಸಿದ ನಂತರ ಅದನ್ನು ಉತ್ತಮವಾಗಿ ತೊಳೆದು ಗಂಜಿಯನ್ನಾಗಲಿ ಇಲ್ಲವಾದಲ್ಲಿ ಇಸ್ತ್ರೀಯನ್ನು ಮಾಡಿ ಕಪಾಟಿನಲ್ಲಿಟ್ಟು ಇಲಿಯು ಕಡಿಯದಂತೆ 'ಡಾಂಬರು ಗುಳಿಗೆ'ಯನ್ನು ಇಡುತ್ತಾರೆ. ಇಲ್ಲವೇ ಸುಗಂಧಭರಿತವಾದ ಮತ್ತು ಕ್ರಿಮಿಗೆ ಮಾರಕವಾದ ಔಷಧವನ್ನು ಸಿಂಪಡಿಸುತ್ತಿದ್ದರು. ಈ ವಿಧಾನದಿಂದ ಬಟ್ಟೆಗಳಿಗೆ ಹಾನಿಯಾಗುವುದನ್ನು ತಪ್ಪಿಸಬಹುದಾಗಿತ್ತು. ಮದುವೆಯಲ್ಲಿ ಬಳಸಬಹುದಾದ 'ಪಿತಾಂಬರ' ಸೀರೆಗಳನ್ನು ಉತ್ತರೆಯ ಬಿಸಿಲಿನಲ್ಲಿ ಒಣಗಿಸುತ್ತಿದ್ದರು. ಅಂದರೆ

ಈ ಸಮಯದಲ್ಲಿ ವಿರೀತವಾದ ಬಿಸಿಲಿರುವುರಿಂದ ಸೀರೆಯ ಸೂಕ್ಷ್ಮ ರಂದ್ರಗಳಲ್ಲಿ ಅಡಗಿರುವ ಹಾನಿಕಾರಕ ಸೂಕ್ಷ್ಮಾಣು ಜೀವಿಗಳು ಸತ್ತು ಹೋಗುತ್ತಿದ್ದವು.

### ೪.೩. ಕೃಷಿ ಪರಿಕರಗಳು

ಕೃಷಿ ಪರಿಕರಗಳಾದ ರಂಟೆ, ಕುಂಟೆ, ಕೂರ್ಗಿ, ಸೆಡ್ಡಿ ಬಟ್ಟಲು, ಕುರ್ಜಗಿ, ಕುಡಗೋಲು, ತಾಳು, ಈಸು ಮುಂತಾದವುಗಳನ್ನು ನಿತ್ಯ ಬಳಕೆಯಲ್ಲಿ ಉಪಯೋಗಿಸಲಾಗುವುದಿಲ್ಲ. ಕೆಲವೊಂದು ಸಂದರ್ಭದಲ್ಲಿ ಅಗತ್ಯಕ್ಕೆ ಅನುಸಾರವಾಗಿ ಬಳಸುವುದು ವಾಡಿಕೆಯಾಗಿದೆ.

ಕೃಷಿ ಉಪಕರಣಗಳನ್ನು ಮಾಡುವ ಸಂದರ್ಭದಲ್ಲಿ ಕಡಿದು ತಂದ ಮರದ ತುಂಡನ್ನು ಕಾವು ಮಾಡುವ ಮೂಲಕ ವಿಷಯುಕ್ತವಾಗಿಸಿ ನಂತರ ಅವುಗಳಿಗೆ ಕೆಮ್ಮಣ್ಣು, ಸೆಗಣಿ, ಸುಣ್ಣ ಬಳಿದು ಅಗತ್ಯವಿದ್ದಾಗ ಹೊರತೆಗೆಯುತ್ತಾರೆ. ಅವುಗಳಿಗಾಗಿಯೇ ಪ್ರತ್ಯೇಕ ಗುದಾಮನ್ನು ನಿರ್ಮಿಸಲಾಗುತ್ತದೆ. ಕಬ್ಬಿಣ ಪದಾರ್ಥಗಳಿಗೆ ಕ್ರೋಮಿಯಂ ಮತ್ತು ಬಣ್ಣ ಹಚ್ಚುವುದರ ಮೂಲಕ ಹೆಚುಕಾಲ ಬಾಳಿಕೆ ಬರುವಂತೆ ಜಾಗ್ರತೆ ವಹಿಸುತ್ತಿದ್ದರು.

### ೪.೪. ದಿನ ಬಳಕೆಯ ಪರಿಕರಗಳು

ವೈಚಾರಿಕತೆಗಳಲ್ಲಿ ಮಾನವನು ತನ್ನದೇ ಅದ ಮಾರ್ಗವನ್ನು ಕಂಡುಕೊಂಡಿದ್ದಾನೆ. ತನ್ನದೇ ಆಗಿರುವ ಆಸೆ ಆಕಾಂಕ್ಷೆಯನ್ನು ಹೊಂದಿದ್ದಾನೆ. ತಾನು ಇಲ್ಲವಾದಲ್ಲಿ ತನ್ನ ಸಂತತಿಯೊಂದನ್ನು ತನ್ನ ಕುರುಹಾಗಿ ಬಿಟ್ಟು ಹೋಗಿರುತ್ತಾನೆ. ಈ ಜೈವಿಕ ಚಕ್ರಕ್ಕೆ ತೈಲಚಾಲಕ ಶಕ್ತಿಯಾಗಿ ಆಹಾರವು ತನ್ನ ಕಾರ್ಯವನ್ನು ನಿಬಾಯಿಸುತ್ತದೆ. ಆ ಆಹಾರವನ್ನು ತಯಾರಿಸಲು ಅಡಿಗೆಯ ಸಾಮಗ್ರಿಗಳು ಅತ್ಯವಶ್ಯವಾಗಿವೆ. ಆ ಸಾಮಗ್ರಿಗಳ ಸಂಗ್ರಹ ಸಂರಕ್ಷಣೆಯ ಜೊತೆ ಜೊತೆಗೆ ಸಂವರ್ಧನೆಯೂ ಪೂರಕವಾಗಿ ನಡೆಯುತ್ತದೆ.

ತಾಮ್ರದಿಂದ ತಯಾರಿಸಿದ 'ಹಂಡೆ'ವನ್ನು ದೀರ್ಘಕಾಲ ಬಾಳಿಕೆ ಬರಲು ಅದಕ್ಕೆ ಕೆಳಭಾಗಕ್ಕೆ ಉರುಮಂಜನ್ನು ಹಚ್ಚಿರುತ್ತಾರೆ. ಅದಲ್ಲದೆ ತಳಕ್ಕೆ ನಾರಿನಿಂದ ಮಾಡಿದ ಸಿಂಬೆಯನ್ನು ಇಡುತ್ತಾರೆ. ಇದರಿಂದ ಅದರ ಸವಕಳಿಯ ಪ್ರಮಾಣವನ್ನು ಕಡಿಮೆಗೊಳಿಸಬಹುದು. ಅದು ಶಿಥಿಲೀಕರಣವಾಗದಂತೆ ತಡೆಯಲು ಪ್ರತಿನಿತ್ಯ ಪಿತಾಂಬರಿಯಿಂದ ತೊಳೆದು ಶುಚಿಗೊಳಿಸಬೇಕು. ಈ ವಿಧಾನದಿಂದ ಹೊಳೆಯುತ್ತಲ್ಲದೆ ಕೊಳೆ ರಹಿತವಾಗಿಯೂ ಕಾಣುತ್ತದೆ.

ಹಿತ್ತಾಳಿಯಿಂದ ನಿರ್ಮಾಣ ಮಾಡಿರುವಂತಹ ವಸ್ತುಗಳನ್ನು ಹಲಸಿಣ ಹಣ್ಣು, ಉಪ್ಪುಗಳ ಮಿಶ್ರಣ ಮಾಡಿ ಈ ಸಾಮಗ್ರಿಗಳ ಮೇಲ್ಮೆಯನ್ನು ಉಜ್ಜಿದರೆ ಹೊಳಪು ಬರುವುದಲ್ಲದೆ ವಸ್ತುವು ಕೂಡಾ ಧೀರ್ಘಬಳಕೆಗೆ ಬರುತ್ತದೆ. ಮೊದಮೊದಲು ಮಡಿಕೆಯನ್ನು ಬಳಕೆ ಮಾಡುತ್ತಿದ್ದರು. ಮಡಿಕೆಯ ಮುಮದುವರಿದ ರೂಪ ಲೋಹದ ಪಾತ್ರೆಗಳು. ಆಧುನಿಕತೆಯು ಮನ–ಮನೆಗಳಲ್ಲಿ ಲಗ್ಗೆ ಇಟ್ಟನಂತರ ಅವುಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಂಡವು.

ಸಮವರ್ಧನೆಯ ಗುಣವನ್ನು ಇನ್ನೊಂದು ಉದಾಹರಣೆಯ ಮೂಲಕ ನೋಡಬಹುದು. ಉಪ್ಪು ಹಾಗೂ ಖಾರ ಅಡುಗೆಗೆ ಸಮಬಂಧಿಸಿದ ದಿನ ಬಳಕೆಯ ವಸ್ತುಗಳು. ಇವು ಬಳಸಿದಷ್ಟು ಬೆಲೆಯುತ್ತವೆ. ಉಂಡಷ್ಟು ಉಳಿಯುತ್ತವೆ. ಸಂಗ್ರಹಿಸಿದಷ್ಟು ಸಂವರ್ಧನೆಗೊಳ್ಳುವ ಮುಖ್ಯ ವಸ್ತುಗಳಾಗಿವೆ. ಜನಪದ ಬದುಕಲ್ಲಿ ಇವುಗಳಿಗೆ ಕೊನೆಯೇ ಇಲ್ಲ. ಉಪ್ಪು-ಖಾರಗಳು ಹಾಕಿದ ಪಾತ್ರೆಗಳನ್ನು ಖಾಲಿಯಾಗುವ ಮೊದಲೇ ಮತ್ತೇ ಅವನ್ನು ತುಂಬಿಸುತ್ತಾರೆ. ಪಾತ್ರೆಯ ತಳ ಕಂಡರೆ ಅದು ಬಡತನಕ್ಕೆ ಮೂಲ ಸಂಪತ್ತಿನ ನಾಶ ಎನ್ನುವ ಕಲ್ಪನೆ ಅವರಲ್ಲಿದೆ. ಅದೇರಿತಿ ಮನೆಮುಂದೆ ಬರುವ ಬೈರಾಗಿ ಭಿಕ್ಷುಕರಿಗೆ ಧಾನ್ಯರೂಪದ ಭಿಕ್ಷೆ ನೀಡಿದಾಗ ಭಿಕ್ಷುಕರು ದಾನ ಮಾಡಿದ ಪಾತ್ರೆಗೆ ತಿರುಗಿ ಸ್ವಲ್ಪ ಕಾಳುಗಳನ್ನು ಹಾಕುತ್ತಾರೆ. ಇದಕ್ಕೆ 'ಹೆಚ್ಚಾಗುವುದು' ಎಮದು ಕರೆಯುತ್ತಾರೆ. ಅಂದರೆ ಬರೀ ಪಾತ್ರೆ ಅಥವಾ 'ಮರ'ವನ್ನು ಒಳಗೊಯ್ಯಬಾರದು ಎನ್ನುವ ಭಾವನೆ ಅವರಲ್ಲಿದೆ. ಯಾವುದೇ ಪಾತ್ರೆಗಳನ್ನು ಹೊರಗಿನಿಂದ ಒಳಗೊಯ್ಯಬೇಕಾದರೆ ಖಾಲಿ ಒಯ್ಯುವುದಿಲ್ಲ. ಇನ್ನೊಮದು ಉದಾಹರಣೆ ಯಾರಾದರು ಮನೆಗೆ ('ಹೆಪ್ಪು' ಕೇಳಲು ಹೋದರೆ ಖಾಲಿ ಬಟ್ಟಲನ್ನು ಒಯ್ಯಬಾರದು ಅದರಲ್ಲಿಸ್ವಲ್ಪ ಹಾಲನ್ನು ಹಾಕಿಸಿಕೊಂಡು ಅದರಲ್ಲಿ ಹೆಪ್ಪಿಗೆ ಬೇಕಾದ ದ್ರವವನ್ನು (ಮೊಸರು) ಪಕ್ಕದ ಮನೆಯಿಂದ ತರುತ್ತಾರೆ. ಸಾಂಪ್ರದಾಯಿಕ ಸಮುದಾಯಗಳಲ್ಲಿ ಇಂಥ ಹಲವು ನಿದರ್ಶನಗಳನ್ನು ನೋಡಬಹುದು. ಹುಟ್ಟು-ಸಾವು ಎನ್ನುವ ವೈದಿಕ ಕಲ್ಪನೆಗಿಂತ ಭಿನ್ನವಾದ ಸತ್ಯುಳ್ಳ ನಿರಂತರತೆ ಹಾಗೂ ಉಪಯುಕ್ತತೆಯನ್ನು ಇಂಥಲ್ಲಿ ಕಾಣಬಹುದುದಾಗಿದೆ.

## ೪.೫. ಹಸ್ತಪ್ರತಿಗಳ ಸಂವರ್ಧನೆ

ಜ್ಞಾನ ಪರಿಕರಗಳಾದ ಹಸ್ತಪ್ರತಿಗಳ ಸಂವರ್ಧನೆ ಕೆಲಸ ಸಮಾಜದ ಹಲವು ಘಟಕಗಳಲ್ಲಿ ಹಲವು ರೀತಿಯಿಂದ ನಡೆದುಕೊಂಡು ಬಂದಿದೆ. ಇದು ಆಯಾ ಪ್ರಾದೇಶಿಕ ಹಾಗೂ ಸಾಮಾಜಿಕ ಘಟಕಗಳ ನಂಬಿಕೆ, ಆಚಾರ-ವಿಚಾರಗಳ ಮೇಲೆ ನಿಂತಿರುವಂಥದ್ದು. ಬಹಳ ಮುಖ್ಯವಾಗಿ ಜ್ಞಾನ ಸಾಮಗ್ರಿಗಳ ಸಂವರ್ಧನೆ ಮುಖ್ಯಧಾತು. ಅಪೇಕ್ಷೆ ಹಾಗೂ ಆಕಾಂಕ್ಷೆ ದಾನ ಮೂಲವಾಗಿ, ಜ್ಞಾನ ಮೂಲವಾಗಿ, ಪ್ರಸಾದ ಮೂಲವಾಗಿ, ಆರೋಗ್ಯ ಮೂಲವಾಗಿ, ಆಚರನೆ ಮೂಲವಾಗಿ, ಕರ್ಮೋಪಶಮನ ಮೂಲವಾಗಿ ಹೀಗೆ ಮನುಷ್ಯನ ಹಲವು ಅವಶ್ಯಕತೆಗಳ ಪೂರೈಕೆ ಮೂಲವಾಗಿ ಹಸ್ತಪ್ರತಿಗಳು ಅಭಿವೃದ್ಧಿಗೊಂಡಿದಿದೆ. ಗ್ರಂಥ ಸಂರಕ್ಷನೆ ಹಾಗೂ ಸಂವರ್ಧನೆ ಎನ್ನುವುದು ಪ್ರಭುತ್ವದ ಸಪ್ತಸಂತಾನಗಲಲ್ಲಿ ಒಮದಾಗಿತ್ತು. ಒಂದು ಹಸ್ತಪ್ರತಿಯಲ್ಲಿ

"ಯಿದರ ವಿಚಾರ ಮಾಡಿದವರಿಗೆ ಜನ್ಮಭಯ। ಮೃತ್ಯುಭಯ। ಜ್ವರಭಯ। ರಾಜಭಯ। ಚೋರಭಯ। ಶತ್ರುಭಯ। ಮ್ರಗಭಯ। ಸರ್ಪಭಯ। ದರಿದ್ರಭಯ। ಕರ್ಮಭಯ। ಪೀಡೆಗಳು ಇಲ್ಲದಂತೆ ಮಾಡಬೇಕೆಂದು ಪಾರ್ವತಿ ಶಿವನಿಗೆ ಕೇಳುತ್ತಾಳೆ. ಆಗ ಶಿವನು ಅಮ್ಮನವರ ಪರೋಪಕಾರ ಗುಣವನ್ನು ಮೆಚ್ಚಿ ಹೇ ಪಾರ್ವತಿ ಬೇಡಿದ ಹಾಂಗೆ ಕಾಮ್ಯಗಳಾನು ಕೊಟ್ಟೇನು।

ಹೇ ಪಾರ್ವತಿ ಯಿದನು ಕೇಳಿದರ್ಗೆ ಸಾಧಿಸಿದ ಕ್ರಮವು ದೊರಕುವುದು। ಎಂದು ಹೇಳುತ್ತಾನೆ. ಪರ್ವತ ಕಲ್ಪದ ಈ ಕೃತಿಯಲ್ಲಿ ಪಾರ್ವತಿ ಶಿವನಿಗೆ ಹೇಳುವು ಕ್ರಮ ಜನಮುಂಇಯಾದುದು. ಮನುಷ್ಯನಲ್ಲಿ ಆತ್ಮೋದ್ಧಾರದ ದಾರಿಗಳನ್ನು ಚಿಗುರಿಸುವ ಇಂಥ ಸಂಗತಿಗಳು ಸಂಸ್ಕೃತಿ ಸಂವರ್ಧನೆ ಕ್ರಿಯೆಯ ಬಹುಮುಖ್ಯ ಸಂಗತಿಗಳು.

"ಭಂಡಾರಿದೇವರ ಸೆಟ್ಟಿ ತನಗೆ ಕೇವಲಜ್ಞಾನ ಪ್ರಾಪ್ತಿನಿಮಿತ್ತವಾಗಿ ಕಾರ್ಕಳದ ಶಾಂತಿನಾಥ ಸ್ವಾಮಿಗಳಿಗೆ ಬರೆಸಿಕೊಟ್ಟ.

"ಶಾಂತಿಮತಿ ಅವ್ವಗಳ ಜಯನವರು ತಮಗೆ ಕೇವಲಜ್ಞಾನ ಪ್ರಾಪ್ತಿ ನಿಮಿತ್ತವಾಗಿ ಬರೆದಂಥ ಹಿರೇಪಂಚರಮೇಷ್ಠಿಗಳ ವ್ಯಾಖ್ಯಾನ ಸಮಾಪ್ತ"

"ಹದುಳದಿಂದೊಮ್ಮೆ ಬರೆದೋದಿ ಕೇಳಿದವರ್ಗೆ ಕ್ಷಣದಲ್ಲಿಯೇ ಸರ್ವಪಾಪ ಸಮಸ್ತ ದುಃಖ ನಿವಾರಣೆಯಾಗುವುದು"

"ಯಿ ಪುರಾಣವ ಕೇಳ್ದು ವಂದಿಸಿ ಪೂಜಿಸಿ ಅರ್ಜಿಸಿದವರಿಗೆ ಅನೇಕ ಜನ್ಮಗಳಲ್ಲಿ ಉತ್ತಮ ಪುರುಷತ್ವಹುದು......."

ಕನ್ನಡ ಹಸ್ತಪ್ರತಿಗಳಲ್ಲಿ ಕಾಣುವ ಇಂಥ ಅನೇಕ ಸಂಗತಿಗಳು ಹಸ್ತಪ್ರತಿಗಳ ಸಂಗ್ರಹ–ಸಂರಕ್ಷಣೆ ಹಾಗೂ ಸಂವರ್ಧನೆಗೆ ಪ್ರೇರನೆಯನ್ನು ಒದಗಿಸಿವೆ. ಮೇಲಿನ ಎಲ್ಲ ಸಂಗತಿಗಳು ಕ್ರಿಯಾ ಮೂಲವಾದ ಅರಿವನ್ನು ಮನುಷ್ಯ ಮೂಲವಾದ ಸಾಧನೆಯನ್ನು ಅಪೇಕ್ಷಿಸುತ್ತದೆ. ಸಮಾಜಿಕ ಪ್ರಜ್ಞೆಯ ವಿಶೇಷ ರೂಪಗಳಾದ ಈ ರಚನೆಗಳು ಮಾನವನ ಬೌದ್ಧಿಕ ಹಾಗೂ ಆಧ್ಯಾತ್ಮ ಪ್ರಪಂಚದ ಪ್ರಧಾನ ನೆಲೆಗಳು. ಪ್ರಜಾಕಾಳಜಿಯುಳ್ಳ ಸುಧಾರಣ ಪರ ಮನೋವೃತ್ತಿಯುಳ್ಳ ಇವು ಧರ್ಮದ ದ್ವಂದ್ವ ಸ್ವಭಾವಗಳಾದ ದೌರ್ಬಲ್ಯ ಭೀತಿಗಳ ಫಲಿತಗಾಗಿ ಕಂಡರೆ ಮತ್ತೊಂದೆಡೆ ಆಶಾವಾದಿತನ ಕಾಣಿಸುವ ರಚನಾತ್ಮಕ ಫಲಿತಗಳಾಗಿವೆ. ಹಸ್ತಪ್ರತಿಗಳ ಮಂಗಳಕರವಾದ ಆರಂಭ ಮತ್ತು ಅಂತ್ಯ ಸಂಧಿ ಸಂಧಿಗೆ ಸಲ್ಲುವ ಕ್ರಿಯಾಚರಣೆಗಳು ಒಮದು ಆವರ್ತನಾಶೀಲ ಸಂವರ್ಧನೆ ಸಾಂಸ್ಕೃತಿಕ ವೈಶಿಷ್ಟ್ಯವನ್ನು ಗರ್ಭೀಕರಿಸಿಕೊಂಡಿವೆ. ಕನ್ನಡ ಸಂಸ್ಕೃತಿಯ ಮಾನವ ಇತಿಹಾಸದ ಸೂಕ್ಷ್ಮಾತಿಸೂಕ್ಷ್ಮಸ್ಥರಗಳು ಹಸ್ತಪ್ರತಿಯಲ್ಲಿ ಮೈ ಪಡೆದಿವೆ.

ಹಸ್ತಪ್ರತಿಗಳ ದೈವೀಕಾರನವೂ ಕೂಡ ಅವುಗಳನ್ನು ಸಂರಕ್ಷಣೆ ಹಾಗೂ ಸಂವರ್ಧನೆ ಕ್ರಿಯೆಯ ಮುಖ್ಯ ಮಜಲುಗಳಾಗಿವೆ. ಪಾರಭೌತಿಕ ಹಾಗೂ ಪಾರಲೌಕಿಕ ಸಂಗತಿಗಳನ್ನು ಹಸ್ತಪ್ರತಿಗಳನ್ನು (ತಾಳೆಗರಿ) ತೋರಿಸುವುದುಂಟು. ಸರಸ್ವತಿಯ ಕೈಲ್ಲಿ, ದಾರ್ಶನಿಕರ ಕೈಯಲ್ಲಿ ಪುಸ್ತಕಗಳನ್ನಿಡುವುದು (ತಾಳೆಗರಿಕಟ್ಟು) ಕಂಡುಬರುತ್ತದೆ. ಒಂದೊಂದು ಸಲ ಇದು ಎಷ್ಟು ವಿಚಿತ್ರವಾಗಿರುತ್ತದೆಂದರೆ ಓದು–ಬರಹಬಾರದ ದಾರ್ಶನಿಕರನ್ನು ಬರೆವ ಅಥವಾ ಓದುವ ಭಂಗಿಯಲ್ಲಿ ಪರಿಭಾವಿಸಿಕೊಳ್ಳುವ ವಿಲಕ್ಷಣತೆಗಳೂ ಕಂಡುಬರುತ್ತವೆ.

ವೀರಶೈವ ಮಠಗಳಲ್ಲಿ, ಜೈನ ಮಠಗಳಲ್ಲಿ ಹಸ್ತಪ್ರತಿ ಗದ್ದುಗೆ ಹಾಗೂ ಜಗಲಿ ಏರಿ ದೇವರ ಸ್ಥಾನವನ್ನು ಪಡೆದಿವೆ. ಪುಸ್ತಕವನ್ನು ತ್ರಿಮೂರ್ತಿಕರಣಗೊಳಿಸಲಾಗಿದೆ. ದಾರವನ್ನು ವಾಸುಕೀ

ಎಂದು ಪುಸ್ತಕದ ಉದ್ದ ಅಗಲವನ್ನು ಮಹಾವಿಷ್ಣವೆಂದು ಲಿಪಿಯನ್ನು ಮಹೇಶನೆಂದು ಅಕ್ಷರಗಳನ್ನು ಸರಸ್ವತಿಯೆಂದೂ ಪರಿಭಾವಿಸಲಾಗಿದೆ. ಹಸ್ತಪ್ರತಿಗಳ ಬಗೆಗಿದ್ದ ಪಾರಲೌಕಿಕ ಕಲ್ಪನೆಗಳೂ ಕೂಡ ಅವುಗಳ ಸಂಗ್ರಹ-ಸಂರಕ್ಷಣೆ ಹಾಗೂ ಸಂವರ್ಧನೆಗೆ ಕಾರಣವಾದವು.

ಹೊಸ ಪುಸ್ತಕಗಳ ಬರವಣಿಗೆಗಳಲ್ಲದೆ ಶಿಥಿಲವಾದ ಪುಸ್ತಕಗಳ ಮರುಬರವಣಿಗೆ ಕೂಡ ನಡೆಯುತ್ತಿತ್ತು. ಇದು ಓದು-ಬರಹ ಹಾಗೂ ಶ್ರವಣ ರೂಪದಲ್ಲಿ ನಡೆಯುತ್ತಿತ್ತು. ಅಂದರೆ ಒಂದು ಸಂಸ್ಕೃತಿಯ ಅಂತಶಕ್ತಿಯ ಸ್ವರೂಪವೇ ಇದಾಗಿತ್ತು ಎನ್ನುವುದು ಗಮನಾರ್ಹ. ಎಷ್ಟೋಸಾರಿ ಈ ಧಾರ್ಮಿಕೀಕರಣ ಗುಣವು ನೆಲ, ಜಲ, ಭವಿಷ್ಯ, ಪ್ರಾಣಿ, ಪಕ್ಷಿಗಳ ನೆಲ ಬೆಲೆಯ ತಿಳುವಳಿಕೆಗಾಗಿ, ರಸಜ್ಞಾನಕ್ಕಾಗಿ ಹಾವು, ಚೇಳು ಕಡಿತದ ನಿವಾರಣೆಗಾಗಿ. ಅಡಿಗೆ ವಿಚಾರಕ್ಕಾಗಿ ಹೀಗೆ ಲೌಕಿಕ ಅಗತ್ಯಗಳ ಪೂರೈಕೆಗಾಗಿ ಹುಟ್ಟಿದ ಹಲವು ಲೋಕಾಯತ ಕೃತಿಗಳು ಇಂಥ ದೈವೀಕೃತ ನೆಲೆಯಲ್ಲಿ ಸೇರಿಹೋದವು. ಒಟ್ಟಿನಲ್ಲಿ ಕವಿ, ಲಿಪಿಕಾರ, ಲಿಪೀಕರಣ, ಪೋಷಕ, ಪ್ರಸಾರಕರ ಹಾಗೂ ಕೇಳುಗ ಇವರ ಸಾತತ್ಯದಲ್ಲಿ ಇಡೀ ಹಸ್ತಪ್ರತಿಯಂಥ ಜ್ಞಾನ ಸಾಮಗ್ರಿಗಳ ಸಂವರ್ಧನೆಗೊಂಡಿದ್ದು ವಿಶೇಷ ಸಂಗತಿಯಾಗಿದೆ.



ಇಡೀ ಅಧ್ಯಯನವೇ ನನ್ನಮಟ್ಟಿಗೆ ಈ ಕ್ಷೇತ್ರದ ಹೊಸ ಪರಿಕಲ್ಪನೆಯಾಗಿದೆ. ಜ್ಞಾನ ಸಾಮಗ್ರಿಗಳ ಸಂಗ್ರಹ–ಸಂರಕ್ಷಣೆ ಹಾಗೂ ಸಂವರ್ಧನೆ ಬಗ್ಗೆ ಒಂದಷ್ಟು ಅಧ್ಯಯನ ನಡೆದಿತ್ತು. ಆದರೆ ಜ್ಞಾನೇತರ ಸಂಗ್ರಹಗಳ ಬಗ್ಗೆ ಈ ಪರಿಕಲ್ಪನಾತ್ಮಕ ಅಧ್ಯಯನ ನಡೆದಿರಲಿಲ್ಲ ಎಂದೇ ಹೇಳಬೇಕು .ಇಂದು ಪ್ರಚಲಿತವಿರುವ ಎಲ್ಲ ರೀತಿಯ ಸಂಗ್ರಹ ಹಾಗೂ ಸಂರಕ್ಷಣಾ ಕ್ರಮಗಳಿಗೆ ಪ್ರಕೃತಿ ಹಾಗೂ ಪರಂಪರಯೇ ಮೂಲಧಾತುವಾಗಿದೆ ಎನ್ನುವುದು ಈ ಅಧ್ಯಯನದ ಸ್ಪಷ್ಟ ತಿಳುವಳಿಕೆ. ಪ್ರಕೃತಿ ಪ್ರೇರಣೆ ಇಲ್ಲದೆ ಯಾವ ವಿಧಾನಗಳು ಚಾಲ್ತಿಗೆ ಬರಲು ಸಾಧ್ಯವಿಲ್ಲ. ಬರೀ ಅನ್ಯ ಸಿದ್ಧಾಂತಗಳನ್ನು ಮುಂದುಮಾಡಿಕೊಂಡು ಇಂಥ ಸಂಗತಿಗಳನ್ನು ಅಧ್ಯಯಿನಿಸುವುದು ಅಪಾಯಕಾರಿಯಾದುದು. ಯಾಕೆಂದರೆ ಪಾರಂಪರಿಕ ಸಂಗ್ರಹ ಹಾಗೂ ಸಂರಕ್ಷಣಾ ಕ್ರಮಗಳಿಗೆ ಪ್ರಕೃತಿಯೊಂದಿಗೆ ಒಂದು ಜೀವಂತ ಸಂಬಂಧವಿದೆ. ಈ ಸಂಬಂಧವನ್ನು ಕತ್ತರಿಗೆ ಅದನ್ನ ವಸ್ತುರೂಪಿಯಾಗಿ ಗ್ರಹಿಸುವ ನೆಲೆಗಳನ್ನು ಹಾಗೂ ಮ್ಯೂಜಿಯಂ ಪೀಸಾಗಿ ಒಂದು ಸಂಸ್ಕೃತಿಯನ್ನು ನೆಲೆಗೊಳಿಸುವ ನೆಪಗಳನ್ನು ಪ್ರಶ್ನಿಸಬೇಕಾಗಿದೆ.

ಸಿದ್ಧ ನಿರ್ಣಯಗಳನ್ನು ಹಾಗೂ ಅಧ್ಯಯನ ಮಾದರಿಗಳನ್ನು ನೆಮ್ಮಿಕೊಂಡು ಸಾಗುವ ಅಧ್ಯಯನ ಪಾರಂಪರಿಕ ಸಂರಕ್ಷಣಾ ಮಾದರಿಗಳನ್ನು ಅನುಮಾನದಿಂದ ನೋಡುತ್ತದೆ. ಹಾಗೂ ಅವೈಜ್ಞಾನಿಕವೆಂದು ಪರಿಭಾವಿಸುತ್ತದೆ. ವಸ್ತುರೂಪಿ ಹಾಗೂ ಗತದ ನಿರ್ಜೀವ ಪಳಿಯುಳಿಕೆಗಳನ್ನು ವ್ಯಾವಹಾರಿಕ ಹಾಗೂ ನಿರ್ಭಾವುಕವಾಗಿ ಗ್ರಹಿಸುತ್ತದೆ ಮತ್ತು ಅದನ್ನು ಲಿಂಗಭೇದದ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸುತ್ತದೆ.

ಸಂಗ್ರಹ ಸಂರಕ್ಷಣೆಯ ಕ್ರಮಗಳ ಹಿಂದೆ ಒಂದು ಕ್ರಿಯಾಶೀಲ ಬದುಕಿನ ಜೈವಿಕ ಜಾಲವೇ ಇದೆ ಎಂಬುದನ್ನು ಈ ಅಧ್ಯಯನ ಆಗುಮಾಡಿದೆ. ಸಂಗ್ರಹ ಎನ್ನುವುದು ಇಲ್ಲಿ ಪದಾರ್ಥರೂಪಿ

ಮಾತ್ರ ಅಲ್ಲ ಅದಕ್ಕೊಂದು ಜೈವಿಕ ಹಾಗೂ ವಂಶವಾಹಿನಿಯ ಅರ್ಥವಿದೆ.

ಯಾವ ವಿಷಯ ಸಂಗತಿಯೂ ಭೌತಿಕರೂಪದ ಆಚೆಗಿನ ಆಂತರಿಕ ಸಂಗತಿಗಳನ್ನು ಅಂತರ್‌ನಿಹಿತವಾಗಿಸಿಕೊಂಡಿರುತ್ತದೆ. ಸಂಗ್ರಹದಲ್ಲಿ ನಾಶದ ಪರಿಕಲ್ಪನೆಗಳಿಗಿಂತ ಬೆಳವಣಿಗೆಗೆ ಹಾಗೂ ವೃದ್ಧಿಗೆ ಬೇಕಾದಂಥ ಮಾನವೀಯ ನೆಲೆಗಳಿವೆ ಎನ್ನುವುದನ್ನು ಕಂಡುಕೊಳ್ಳಲಾಗಿದೆ. ಗಂಡಸು ಪ್ರಣೀತ ವ್ಯಾವಹಾರಿಕ ಹಾಗೂ ಮರಮುಟ್ಟು ರೂಪಿ ಆರ್ಥಿಕ ಹಿತಾಸಕ್ತಿಗಳಿಗೂ ಹೆಣ್ಣು ಪ್ರಧಾನವಾದ ಸಾತತ್ಯರೂಪಿ ಜೀವಂತಿಕೆಯ ನೆಲೆಗಳಿಗೂ ಸಾಕಷ್ಟು ವ್ಯತ್ಯಾಸಗಳಿವೆ.

ಕಾಡು, ಮರ, ಭೂಮಿ, ನೀರು ಅನ್ನ ಔಷದ, ಪುಸ್ತಕ, ವ್ಯಾವಹಾರಿಕ ರೂಪ ಪಡೆದುಕೊಂಡಾಗ ಏಕರೂಪಿಯಾದ ನಿರ್ಜೀವ ಸರಕುಗಳಾಗುತ್ತವೆ. ಉಪಭೋಗದ ವಸ್ತುಗಳಾಗುತ್ತವೆ. ಇಲ್ಲಿ ಶೋಷಣೆಯ ದಾಹ ಮುಖ್ಯವಾಗುತ್ತದೆ. ರಾಸಾಯನಿಕಗಳ ಬಳಕೆಯೇ ಇಲ್ಲಿ ಮುಖ್ಯವಾಗಿ ಜನವಿರೋಧಿ ಹಾಗೂ ಆರೋಗ್ಯ ವಿರೋಧಿಯಾಗಿ ನಿಲ್ಲುತ್ತದೆ. ಸೀಮಿತ ಜನಕ್ಕೆ ಮಾತ್ರ ಅವಕಾಶವನ್ನು ಕಲ್ಪಿಸುತ್ತದೆ.

ಪ್ರಕೃತಿಯ ಸಂಪತ್ತನ್ನು ಊರೊಟ್ಟಿನ ಸಂಬಂಧವಾಗಿ ತಿರುಗಿ ಪಡೆಯುವಲ್ಲಿ ಪ್ರಕೃತಿಶಕ್ತಿ ಹಾಗೂ ಹೆಂಗಸರ ಶಕ್ತಿಗಳೇ ಆಧಾರ. ಪ್ರಕೃತಿ ಹಾಗೂ ಹೆಂಗಸರ ಶಕ್ತಿಗಳೇ ಇಲ್ಲಿ ಬಂಡವಾಳ ನೀರು, ಆಹಾರ, ಮೇವು, ಉರುವಲು, ಬೇಸಾಯ ಉಪಕರಣಗಳು ಅಡುಗೆ ಸಾಮಗ್ರಿಗಳು ಉಡುಗೆ ತೊಡುಗೆಗಳು ಇವೆಲ್ಲ ಮಾನವನ ದೈನಂದಿನ ಹಾಗೂ ದೂರಗಾಮಿ ಅಗತ್ಯಗಳೇ ಆಗಿವೆ. ಇದು ಸಹಬಾಳ್ವೆಯ ಗುಣವನ್ನು ಸಾಮಾಜಿಕ ಸಂಬಂಧಗಳ ಸಂವರ್ಧನೆಯನ್ನು ಬಲವರ್ಧಿಸುತ್ತದೆ.

ಯಾವ ಕ್ಷೇತ್ರದ ಯಾವ ಬಗೆಯ ಅಧ್ಯಯನವೂ ಸಮಗ್ರವೂ ಅಲ್ಲ. ಅಂತೆಯೇ ಅಚ್ಚರಿಯೂ ಅಲ್ಲ. ಇಲ್ಲಿಯವರೆಗೆ ನಡೆದಿರುವ ಅಧ್ಯಯನ ಅಂದರೆ ಅದು ಆಯಾ ಕ್ಷೇತ್ರಕ್ಕೆ ಸಿಕ್ಕ ಆಯಾಮ ಕಾಲದ ಸ್ಪಂದನೆ ಎನ್ನಬಹುದು.

ಸಂವರ್ಧನೆ ಎನ್ನುವುದನ್ನು ಮೆಟಿರಿಯಲಿಸ್ಟ್ ಆದಂಥ ಧೋರಣೆಗಳಿಗಿಂತ ಭಿನ್ನವಾಗಿ ಜೀವ ವೈವಿಧ್ಯತೆ ಹಾಗೂ ಜೀವ ಪೋಷಕ ಕ್ರಿಯೆಯನ್ನಾಗಿ ಪರಭಾವಿಸಲಾಗಿದೆ. ಇದರಿಂದಾಗಿ ಸಂಗ್ರಹ-ಸಂರಕ್ಷಣೆ ಎನ್ನುವ ಕ್ಷೇತ್ರಾಧಾರಿತ ಹಾಗೂ ಕೇವಲ ಆಕರಮುಖಿ ಎನಿಸುವ ವಸ್ತುರೂಪಿಯಾದ ಈ ಪರಿಕಲ್ಪನೆಗಳನ್ನು ವಸ್ತು ಸಂಗ್ರಹಾಲಯದಾಚೆಗಿನ ಜೀವಮುಖಿಯಾದ ಜೈವಿಕ ಸಂಪನ್ಮೂಲವಾಗಿ ವಿಸ್ತರಿಸಿಕೊಳ್ಳಲಾಗಿದೆ. ಸಂಗ್ರಹ-ಸಂರಕ್ಷಣೆ- ಸಂವರ್ಧನೆ ಎನ್ನುವ ಈ ಪರಿಕಲ್ಪನೆನ್ನೇ ಒಂದು ಜೀವಶಾಸ್ತ್ರೀಯ, ಮಾನವಶಾಸ್ತ್ರೀಯ ಸಾತತ್ಯಗಳನ್ನಾಗಿ ನಿರ್ವಚಿಸಲು ಪ್ರಯತ್ನಿಸಲಾಗಿದೆ.



## ಗ್ರಂಥಋಣ


೧. ನಾವಡ ಎ.ವಿ., ಅಂಗಡಿ ಎಸ್.ಎಸ್. (ಸಂ) ಹಸ್ತಪ್ರತಿ ವ್ಯಾಸಂಗ ಸಂಪುಟ-೧, ೨೦೦೨; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ವ್ಹಿ.ಎಸ್. ಬಡಿಗೇರ, ಚನ್ನವೀರಪ್ಪ ಎಸ್.ಆರ್. (ಸಂ) ಹಸ್ತಪ್ರತಿ ವ್ಯಾಸಂಗ ಸಂಪುಟ-೩, ೨೦೦೬; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ವೆಂಕಟಾಚಲಶಾಸ್ತ್ರಿ ಟಿ.ವಿ. ಗ್ರಂಥಸಂಪಾದನಾ ಪರಿಭಾಷಾಕೋಶ; ೨೦೦೪; ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು.

೪. ಗೀತಾಚಾರ್ಯ ನಾ. ಹಸ್ತಪ್ರತಿಶಾಸ್ತ್ರ ವಿವೇಚನೆ; ೨೦೦೦; ಸ್ನೇಹನಿಧಿ ಬಳಗ, ಬೆಂಗಳೂರು.

೫. ಭಾನುಮತಿ ವೈ.ಸಿ. ಗ್ರಂಥಸಂಪಾದನೆಯ ಕೆಲವು ಅಧ್ಯಯನ; ೧೯೯೭; ಕೇಶವ ಪ್ರಕಾಶನ, ಮೈಸೂರು.

೬. ಚನ್ನವೀರಪ್ಪ ಎಸ್.ಆರ್. (ಸಂ) ಹಸ್ತಪ್ರತಿ ವ್ಯಾಸಂಗ ಸಂಪುಟ-೬; ೨೦೦೬; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೭. ಹಳ್ಳಿಕೇರಿ ಎಫ್.ಟಿ. (ಸಂ) ಹಸ್ತಪ್ರತಿ ವ್ಯಾಸಂಗ ಸಂಪುಟ-೭; ೨೦೦೬; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೮. ವ್ಹಿ.ಎಸ್. ಬಡಿಗೇರ (ಸಂ) ಹಸ್ತಪ್ರತಿ ವ್ಯಾಸಂಗ ಸಂಪುಟ-೫; ೨೦೦೬; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೯. ನರಸಿಂಹಾಚಾರ್ಯ ಡಿ.ಎಲ್., ಡಿ.ವಿ.ಕೆ. ಮೂರ್ತಿ, ಕನ್ನಡ ಗ್ರಂಥಸಂಪಾದನೆ; ೨೦೦೫; ಮೈಸೂರು ವಿಶ್ವವಿದ್ಯಲಯ, ಮೈಸೂರು.

೧೦. ಕಲಬುರ್ಗಿ ಎಂ.ಎಂ. ಕನ್ನಡ ಗ್ರಂಥಸಂಪಾದನಶಾಸ್ತ್ರ; ೧೯೯೮; ಸಿರಿಗನ್ನಡ ಪ್ರಕಾಶನ, ಧಾರವಾಡ.

೧೧. ಸಣ್ಣಯ್ಯ ಬಿ.ಎಸ್. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ; ೧೯೯೭; ಶ್ರುತಕೇವಲಿ ಎಜುಕೇಷನ್ ಟ್ರಸ್ಟ್, ಪ್ರಕಾಶಕರು, ಶ್ರವಣಬೆಳಗೊಳ




